ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ



# ಕುಟುಂಬ ಮತ್ತು ಸಮುದಾಯ






ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು 570006

ಪರಿಕಲ್ಪನೆ ಮತ್ತು ಪ್ರಧಾನ ಸಂಪಾದಕರು : ಪ್ರೊ. ಎಂ. ಜಯರಾಮ್

ಪ್ರಕಾಶಕರು : ಪ್ರೊ. ಎಂ. ಜಯರಾಮ್
ನಿರ್ದೇಶಕರು
ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ,
ಮೈಸೂರು 6

ಬರವಣಿಗೆ ಹಾಗೂ ಸಂಕಲನ : ಡಾ. ಐ. ಪಿ. ಗೌರಮ್ಮ
ಡಾ. ಮ. ಜಯರಾಮ್
ಡಾ. ಎಸ್. ವೆಂಕಟೇಶನ್ (ಇಂಗ್ಲೀಷ್)

ಪುಸ್ತಕ ವಿನ್ಯಾಸ/ಮುಖಪುಟ
ಮತ್ತು ತಾಂತ್ರಿಕ ಸಲಹೆ : ಎಂ. ಜಿ. ಮಂಜುಸ್ವಾಮಿ

ಚಿತ್ರಗಳು : ಜಿ. ವಿ. ಗಣೇಶಯ್ಯ

ಬೆಲೆ: ರೂ. 50/-

ಪ್ರ

ಬೆಳವಣಿಗೆ ನ್ಯೂನತೆಗಳುಳ್ಳ ಮಕ್ಕಳ ಪೋಷಕರಿಗೆ ತರಬೇತಿ ಕಾರ್ಯಕ್ರಮ

ಭಾಗ–3

# ಕುಟುಂಬ ಮತ್ತು ಸಮುದಾಯ








ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ
ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು–6

# ನಮ್ಮ ಧ್ಯೇಯ

1966 ರಲ್ಲಿ ಭಾರತ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸ್ವಾಯತ್ತ ಸಂಸ್ಥೆಯಾಗಿ ಹುಟ್ಟು ಪಡೆದ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್ ಶ್ರವಣ ನ್ಯೂನತೆಗಳುಳ್ಳ ಜನರಿಗೆ ಸೇವೆ ಸಲ್ಲಿಸಿದೆ. ಚಿಕಿತ್ಸೆ, ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ.

ನಮ್ಮ ದೇಶದ ಶೇ.10 ರಷ್ಟು ಮಕ್ಕಳು ಒಂದಲ್ಲಾ ಒಂದು ರೀತಿಯ ಮಾತು, ಭಾಷೆ, ಕೇಳುವಿಕೆ ಅಥವಾ ಬುದ್ಧಿವಂತಿಕೆಗೆ ಸಂಬಂಧಪಟ್ಟ ತೊಂದರೆಗಳಿಗೆ ತುತ್ತಾಗಿದ್ದಾರೆ ಎಂದು ಅಂಕಿ ಅಂಶಗಳಿಂದ ತಿಳಿದು ಬರುತ್ತದೆ. ಇಂತಹ ಮಕ್ಕಳನ್ನು ಶೀಘ್ರವಾಗಿ ಗುರುತಿಸಿ, ಭವಿಷ್ಯದಲ್ಲಿ ಅವರಿಗೆ ಸಾಮಾನ್ಯ ಜೀವನ ನಡೆಸಲು ಸಾಧ್ಯವಾಗುವಂತೆ ಚಿಕಿತ್ಸೆ ಹಾಗೂ ತರಬೇತಿ ನೀಡುವುದು ಅತಿ ಅವಶ್ಯಕ. ಆದರೆ ಈ ರೀತಿಯ ಚಿಕಿತ್ಸೆ ಮತ್ತು ತರಬೇತಿ ನೀಡುವ ತಜ್ಞರ ಅವಶ್ಯಕತೆ ಮತ್ತು ಲಭ್ಯತೆಯ ಮಧ್ಯೆ ಬಹಳ ಅಂತರ ಇದೆ. ಅಂತರ ಮಾತ್ರ ಅಲ್ಲ, ಇಂತಹ ತಜ್ಞರ ಸೇವೆ ಎಲ್ಲಿ ಬೇಕೋ ಅಲ್ಲಿ ಸಿಗುತ್ತಿಲ್ಲ. ಹಳ್ಳಿಗಳಲ್ಲಿ ಕೆಲಸ ಮಾಡಲು ಮುಂದೆ ಬರುವವರೇ ಇಲ್ಲ. ನಮ್ಮ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಲಕ್ಷಾಂತರ ತೊಂದರೆ ಇರುವ ಜನರನ್ನು ನಮ್ಮ ಸಲಹೆ, ಸೂಚನೆ, ಸೇವೆಗಳನ್ನು ಪಡೆಯಲು ನಗರ ಪ್ರದೇಶಗಳಲ್ಲಿ ಇರುವಂತಹ ನಮ್ಮ ಸಂಸ್ಥೆಗಳಿಗೆ ಬನ್ನಿ ಎಂದು ಕರೆಯುವುದು ಸಮಂಜಸ ಅಲ್ಲ. ಆದುದರಿಂದ ಮಾತು, ಕೇಳುವಿಕೆಯ ತೊಂದರೆಗಳಿರುವ ಜನರ ಸುತ್ತಮುತ್ತ ಇರುವ ಸಮುದಾಯದ ಒಂದು ವರ್ಗದ ಜನರನ್ನು ಆರಿಸಿ ಅವರಿಗೆ ಸೂಕ್ತ ತರಬೇತಿ ನೀಡಿದರೆ, ನಮ್ಮ ಗ್ರಾಮೀಣ ಪ್ರದೇಶದ ಜನರ ಬವಣೆ ಸ್ವಲ್ಪವಾದರೂ ನೀಗಬಹುದೆಂದು ನಮ್ಮ ಅನಿಸಿಕೆ.

ಈ ದಿಕ್ಕಿನಲ್ಲಿ ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಪೋಷಕರನ್ನು ಗಮನದಲ್ಲಿಟ್ಟುಕೊಂಡು, ದೇಶದಲ್ಲಿಯೇ ಪ್ರಪ್ರಥಮ ಬಾರಿಗೆ ಒಂದು ವಿಶೇಷ ತರಬೇತಿ ಕಾರ್ಯಕ್ರಮವನ್ನು ರೂಪಿಸಿದೆ. ಈ ತರಬೇತಿ ಕಾರ್ಯಕ್ರಮವು ಅಂಚೆ ತೆರಪಿನ ಶಿಕ್ಷಣದ ಮೂಲಕ ನಡೆಯುವಂತೆ ಯೋಜಿಸಲಾಗಿದ್ದು, ಬೆಳವಣಿಗೆಯ ನ್ಯೂನತೆಯ ಮಕ್ಕಳ ತರಬೇತಿಯಲ್ಲಿ ಒಂದು ಹೊಸ ಆಯಾಮವನ್ನು ಹುಟ್ಟು ಹಾಕಿದೆ. ಶ್ರವಣದೋಷ, ಮಾತು ಕೇಳುವಿಕೆಯ ದೋಷವಿರುವ ಪ್ರತಿಯೊಂದು ಮಗುವಿಗೂ ಈ ಆರೈಕೆ/ಸೇವೆ ತಲುಪುವಂತಾಗಬೇಕು. ಅವರೆಲ್ಲರ ನಾಳೆಯ ಬದುಕು ಹಸನಾಗಬೇಕು ಎಂಬುದೇ ನಮ್ಮ ಕನಸು ಮತ್ತು ಧ್ಯೇಯ.

ಮಾತು,ಕೇಳುವಿಕೆಯ ನ್ಯೂನತೆಯಿರುವ ಮಕ್ಕಳ ತರಬೇತಿಗಾಗಿ ಪೋಷಕರಿಗೆ ರೂಪಿಸಿರುವ ಈ ಕಾರ್ಯಕ್ರಮವು ಹಲವು ಅಂಶಗಳಲ್ಲಿ ಪೋಷಕರಿಗೆ ತರಬೇತಿಯನ್ನು ನೀಡುತ್ತದೆ. ತೊಂದರೆಗಳ ಗುರುತಿಸುವಿಕೆ, ತಡೆಗಟ್ಟುವಿಕೆ, ನಿರ್ವಹಣೆ, ಇಂತಹ ಮಕ್ಕಳ ತರಬೇತಿ, ಸರ್ಕಾರದಿಂದ ಇಂತಹ ಮಕ್ಕಳಿಗೆ ನೀಡಲಾಗಿರುವ ವಿಶೇಷ ಸೌಲಭ್ಯ, ಸವಲತ್ತು, ಹಕ್ಕುಗಳ ಬಗ್ಗೆ ಮಾಹಿತಿ, ಸರ್ಕಾರದ ಕಾರ್ಯಕ್ರಮಗಳ ಕಾನೂನುಗಳ ಬಗ್ಗೆ ತಿಳಿವಳಿಕೆ–ಇತ್ಯಾದಿ. ಅತಿ ಮುಖ್ಯವಾಗಿ, ಮಾತು ಕೇಳುವಿಕೆಗೆ ಸಂಬಂಧಪಟ್ಟ ನ್ಯೂನತೆಗಳುಳ್ಳ ಮಕ್ಕಳಿಗೆ ಮನೆಯಲ್ಲೇ ನಡೆಸಬಹುದಾದ ತರಬೇತಿ. ಇದಕ್ಕಾಗಿ ನಾಲ್ಕು ಭಾಗಗಳ ಒಂದು ತರಬೇತಿ ಕಾರ್ಯಕ್ರಮವನ್ನು ಸಂಸ್ಥೆಯು ರೂಪಿಸಿದೆ. ಭಾಗ 1, 3 ಮತ್ತು 4 ಎಲ್ಲರಿಗೂ ಕಡ್ಡಾಯ. ಭಾಗ '2' ರಲ್ಲಿ ನಾಲ್ಕು ವಿಷಯಗಳಿದ್ದು, ಪ್ರತಿಯೊಬ್ಬರೂ ಕಡ್ಡಾಯವಾಗಿ ಎರಡು ವಿಷಯಗಳನ್ನು ಅಭ್ಯಸಿಸಬೇಕು. ಈ ತರಬೇತಿಯ ವಿಶೇಷವೆಂದರೆ ಪೋಷಕರಿಗೆ ತಮ್ಮ ಮಕ್ಕಳಲ್ಲಿರುವ ತೊಂದರೆಯ ಬಗ್ಗೆ ಮಾತ್ರವೇ ಅಲ್ಲ. ಉಳಿದ ತೊಂದರೆಗಳ ಬಗ್ಗೆಯೂ ಅಭ್ಯಾಸ ಮಾಡಲು ಭಾಗ '2' ರಲ್ಲಿ ಅವಕಾಶ,ಪ್ರೋತ್ಸಾಹ ನೀಡಲಾಗುವುದು.

ಪ್ರಸ್ತುತ ಅಂಚೆ ತೆರಪಿನ ಶಿಕ್ಷಣದ ಮೂಲಕ ಕನ್ನಡದಲ್ಲಿ ತರಬೇತಿಯನ್ನು ಆರಂಭಿಸುತ್ತಿದ್ದೇವೆ. ಮುಂದೆ ಇಂಗ್ಲೀಷ್, ಹಿಂದಿ, ಮಲಯಾಳಂ ಮತ್ತು ನಮ್ಮ ದೇಶದ ಇತರ ಮುಖ್ಯ ಭಾಷೆಗಳಲ್ಲೂ ಸಹ ತರಬೇತಿಯನ್ನು ಪ್ರಾರಂಭಿಸುತ್ತೇವೆ. ಈ ತರಬೇತಿ ಎಸ್.ಎಸ್.ಎಲ್.ಸಿ (10ನೇ ತರಗತಿ)ಯಲ್ಲಿ ಉತ್ತೀರ್ಣರಾಗಿರುವ ಎಲ್ಲಾ ಪೋಷಕವರ್ಗದವರಿಗೂ ಲಭ್ಯವಿದೆ.

ನ್ಯೂನತೆಯುಳ್ಳ ಮಕ್ಕಳನ್ನು ಬೌದ್ಧಿಕವಾಗಿ, ಮಾನಸಿಕವಾಗಿ ಬೆಳೆಸುವಲ್ಲಿ ಪೋಷಕರ ಪಾತ್ರವೇ ದೊಡ್ಡದು. ವಿಕಲಾಂಗ ಮಗುವು ತನ್ನ ಮಾರ್ಗದರ್ಶಿಯಾಗಿ ತಜ್ಞರಿಗಿಂತ ಮನೆಯವರನ್ನೇ ಹೆಚ್ಚು ಇಷ್ಟಪಡುತ್ತದೆ. ಪ್ರಸ್ತುತ ಪಠ್ಯದ ಚರ್ಚೆಯಲ್ಲಿ ವಿಕಲಾಂಗ ಮಗುವಿನ ಪೋಷಕರು ಮಗುವಿನ ಬೆಳವಣಿಗೆಗೆ ಅನುಸರಿಸಬಹುದಾದ ವಿಧಾನಗಳನ್ನು ನೀಡಲಾಗಿದೆ. ವಿಕಲಾಂಗ ಮಗುವನ್ನು ಎಲ್ಲರ ಜೊತೆಯಲ್ಲಿ ಬದುಕುವಂತೆ ಮಾಡಲು, ಕೀಳರಿಮೆಯಿಂದ ನರಳದೆ ಇರಲು ಪೋಷಕರು ಯಾವ ಯಾವ ಕ್ರಮಗಳನ್ನು ಅನುಸರಿಸಬೇಕು? ಅವರನ್ನು ಗುರುತಿಸುವುದು ಹೇಗೆ? ಮನೆಯನ್ನೇ ಶಾಲೆಯನ್ನಾಗಿ ಪರಿವರ್ತಿಸುವ ವಿಧಾನಗಳೇನು? ಸರಕಾರದ ಮಟ್ಟದಲ್ಲಿ ವಿಕಲಾಂಗ ಮಕ್ಕಳಿಗೆ ಇರುವ ಸೌಲಭ್ಯಗಳೇನು? ಅವರ ತರಬೇತಿಯ ವಿಧಾನಗಳೇನು? ಎಂಬುದರ ಬಗ್ಗೆ ಈ ಭಾಗದಲ್ಲಿ ವಿವರವಾಗಿ ಚರ್ಚಿಸಲಾಗಿದೆ.

ಈ ಸರ್ಟಿಫಿಕೇಟ್ ಪಠ್ಯ ಕ್ರಮವು ಪೋಷಕ ವರ್ಗದವರಿಗೆ ಇದ್ದರೂ ಸಹ, ಮಾತು, ಭಾಷೆ, ಕೇಳುವಿಕೆಯ ತೊಂದರೆಗಳುಳ್ಳ ಮಕ್ಕಳ ತಂದೆ ತಾಯಿಯರಿಗೆ ವಿಶೇಷವಾಗಿ ರೂಪಿಸಲ್ಪಟ್ಟಿದ್ದರೂ ಕೂಡ, ಹೆಚ್ಚಿನ ಸಂಖ್ಯೆಯಲ್ಲಿ ತಾಯಿಯರು, ನಮ್ಮ ಸೋದರಿಯರು ಇದರ ಪ್ರಯೋಜನ ಪಡೆಯಲಿ ಎಂದು ನಮ್ಮ ಆಸೆ. ಯಾಕೆಂದರೆ ಒಂದು ಮಗುವಿನ ಶಿಕ್ಷಣದಲ್ಲಿ, ಒಂದು ಮಗುವಿನ ಪಾಲನೆ ಪೋಷಣೆಯಲ್ಲಿ, ಒಂದು ಮಗುವಿನ ಬೇಕು ಬೇಡಗಳನ್ನು ಗುರುತಿಸುವಲ್ಲಿ, ತಾಯಿಯರಿಗೆ ಎಣೆಯೇ ಇಲ್ಲ. ಯಾಕೆ, ನಾಣ್ಣುಡಿಯೇ ಇದೆಯಲ್ಲ – ಒಂದು ಸಂಸಾರದಲ್ಲಿ ಓದು ಬರಹ ಬಲ್ಲ ಒಬ್ಬಳು ಹೆಣ್ಣಿದ್ದರೆ, ಇಡೀ ಸಂಸಾರವೇ ಮುಂದೆ ಬರುತ್ತದೆ ಎಂದು. ಈ ರೀತಿ ತರಬೇತು ಪಡೆದ ಒಬ್ಬ ತಾಯಿ ತನ್ನ ಮಗಳು, ಮಗನಿಗಷ್ಟೇ ಅಲ್ಲ, ತನ್ನ ಸುತ್ತಮುತ್ತಲಿನ ಎಲ್ಲಾ ಮಕ್ಕಳಿಗೂ ದಾರಿದೀಪವಾಗಬಲ್ಲಳು.

ಈ ಪಠ್ಯ ಕ್ರಮವನ್ನು ರೂಪಿಸುವಲ್ಲಿ, ಬರೆಯುವಲ್ಲಿ ನಾವೆಷ್ಟು ಸಫಲರಾಗಿದ್ದೇವೆ ಎನ್ನುವುದರ ಬಗ್ಗೆ ನಿಮ್ಮ ಅನಿಸಿಕೆ ಬಹುಷ ಅವಶ್ಯ. ದಯವಿಟ್ಟು ಈ ಪಠ್ಯದ ನಿರೂಪಣೆ, ತಾಂತ್ರಿಕತೆ, ಸರಳತೆ ಮತ್ತು ನ್ಯೂನತೆಗಳ ಬಗ್ಗೆ ನಮಗೆ ಬರೆದು ತಿಳಿಸಿ. ಸಾಧ್ಯವಾದಷ್ಟು ನಿಮ್ಮ ಅವಶ್ಯಕತೆಗಳನ್ನು ಪೂರೈಸಲು, ನಿಮ್ಮ ಅನಿಸಿಕೆಗಳನ್ನು ಗೌರವಿಸಲು, ನಿಮ್ಮ ಆಶಯಗಳನ್ನು ಮುಟ್ಟಲು ಮುಂದಿನ ಪ್ರಕಟಣೆಗಳಲ್ಲಿ ಪ್ರಯತ್ನಸುತ್ತೇವೆ. ನಮ್ಮ ಸಂಸ್ಥೆಯ ಆಸೆ – ಆಕಾಂಕ್ಷೆಗಳನ್ನು ಸಾಕಾರಗೊಳಿಸಲು ನಿಮ್ಮ ಸಹಕಾರ ಅತ್ಯಗತ್ಯ.

ಈ ತರಬೇತಿಯ ಪಠ್ಯ ವಿಷಯಗಳನ್ನು ರೂಪಿಸುವಲ್ಲಿ ವಿಷಯ ತಜ್ಞರು, ವಿಶೇಷ ತಜ್ಞರು ಹಾಗೂ ಸಂಪಾದಕ ಮಂಡಲಿಯ ಸದಸ್ಯರು ಹಗಲಿರುಳು ಶ್ರಮಿಸಿದ್ದಾರೆ. ಸಂವಹನ ಯೋಗ್ಯವಾದ ಪಠ್ಯವನ್ನು ರೂಪಿಸುವಲ್ಲಿ ಇವರೆಲ್ಲರೂ ಯಶಸ್ವಿಯಾಗಿದ್ದಾರೆ ಎಂದು ನನ್ನ ಭಾವನೆ. ಇದಕ್ಕಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ನನ್ನ ಹಾಗೂ ನಮ್ಮ ಸಂಸ್ಥೆಯ ವಿಶೇಷ ಅಭಿನಂದನೆಗಳು.

**ಡಾ. ಮ. ಜಯರಾಮ್**
ನಿರ್ದೇಶಕರು

# ಪರಿವಿಡಿ

## ಅಧ್ಯಾಯ –1

# ನ್ಯೂನತೆಯುಳ್ಳ ಮಕ್ಕಳನ್ನು ಬೆಳೆಸುವಲ್ಲಿ ಪೋಷಕರ ಮತ್ತು ಸಮುದಾಯದ ಪಾತ್ರ



ಪ್ರತಿಯೊಂದು ಮಗುವೂ ಹುಟ್ಟುತ್ತಲೇ ತನ್ನೊಂದಿಗೆ ಕೆಲವು ವಿಶಿಷ್ಟ ಗುಣ ಲಕ್ಷಣಗಳನ್ನು ಪಡೆದುಕೊಂಡು ಬಂದಿರುತ್ತದೆ. ಇದು ಪ್ರಕೃತಿ ಸಹಜ. ನಮ್ಮ ಸಮಾಜ ದುರದೃಷ್ಟವಶಾತ್ ಎಲ್ಲವನ್ನೂ ತನ್ನದೇ ಆದ ಮಾನದಂಡದ ಮೂಲಕ ತೂಗಿ ನೋಡಿ, ಮೇಲು ಕೀಳು ಎಂಬ ಭೇದ ಭಾವ ಮಾಡುತ್ತದೆ. ಮನುಷ್ಯರೆಲ್ಲರೂ ಒಂದೇ ರೀತಿ ಇರಲು ಸಾಧ್ಯವಿಲ್ಲ. ಒಬ್ಬೊಬ್ಬರ ವ್ಯಕ್ತಿತ್ವವೂ ವಿಶಿಷ್ಟ. ಸಮುದಾಯವು ನಮ್ಮನ್ನು ನೋಡುವ ದೃಷ್ಟಿಕೋನವನ್ನು ಬದಲಿಸಿಕೊಂಡರೆ, ಈ ಸಮಾಜವು ನಮಗೆ ಬದುಕಲು ಒಂದು ಸುಂದರ ಸ್ಥಳ, ಇಲ್ಲದಿದ್ದರೆ ನ್ಯೂನತೆಯುಳ್ಳ ವ್ಯಕ್ತಿಗಳು, ಮಕ್ಕಳು, ಪೋಷಕರು ಹಾಗೂ ಇಡೀ ಕುಟುಂಬದ ಸದಸ್ಯರೆಲ್ಲರೂ ಹೇಳಲಾರದ ನೋವನ್ನು, ಹೆಚ್ಚಿನ ಸಮಯ ಮೂಕವಾಗಿ ಅನುಭವಿಸುತ್ತಾರೆ. ಅವರಲ್ಲಿರುವ ಸಾಮರ್ಥ್ಯವನ್ನು ಅರಳಲು ಬಿಡದೆ ಮೊಗ್ಗಿನಲ್ಲೆ ಚಿವುಟುತ್ತಿದ್ದೇವೆ. ವ್ಯಕ್ತಿಯಲ್ಲಿರುವ ಅಸಮರ್ಥತೆಯನ್ನು ಭೂತಕನ್ನಡಿ ಹಿಡಿದು ನೋಡುವ ಸಮಾಜ ಅವರ ಭಿನ್ನ ಆದರೆ ವಿಶಿಷ್ಟವಾದ ಸಾಮರ್ಥ್ಯವನ್ನು ನೋಡುವಲ್ಲಿ ಕಣ್ಣಿದ್ದೂ ಕುರುಡಾಗುತ್ತದೆ. ಈ ಹಿನ್ನೆಲೆಯಲ್ಲಿ ಪೋಷಕರಾಗಿ ನಿಮ್ಮ ಮಕ್ಕಳನ್ನು ಸರಿಯಾದ ಮಾರ್ಗದಲ್ಲಿ ಬೆಳೆಸುವುದು ಸುಲಭವಲ್ಲ.

ಮಕ್ಕಳನ್ನು ಬೆಳೆಸುವುದು ಒಂದು ಗಂಭೀರ ಮತ್ತು ಶ್ರಮದ ಕೆಲಸ. ವಿಶೇಷ ಅಗತ್ಯವಿರುವ ಮಕ್ಕಳನ್ನು ಬೆಳೆಸುವುದು ಇನ್ನೂ ದೊಡ್ಡ ಸವಾಲು. ಜವಾಬ್ದಾರಿ ಮತ್ತು ಸರಿಯಾದ ತಿಳಿವಳಿಕೆಯಿಂದ ಮಾಡಬೇಕಾದ ಕಾರ್ಯ. ನ್ಯೂನತೆಯಿರುವ ಮಕ್ಕಳನ್ನು ಬೆಳೆಸಲು ಬರೇ ಸಾಮಾನ್ಯ ತಿಳುವಳಿಕೆ ಸಾಲದು. ನಮ್ಮ ಅಜ್ಜ ಅಜ್ಜಿಯರ ಕಾಲದಲ್ಲಿ ಮಕ್ಕಳನ್ನು ಬೆಳೆಸಿದ ವಿಧಾನಗಳನ್ನು ಈಗ ಈ ಮಕ್ಕಳಿಗೆ ಅನುಸರಿಸಿದರೆ ಅದು ಪರಿಣಾಮಕಾರಿಯಾಗಲಾರದು. ಆದ್ದರಿಂದ ಈ ಮಕ್ಕಳನ್ನು ಬೆಳೆಸಲು ಬೇಕಾಗುವ ವಿಶೇಷ ಕೌಶಲಗಳನ್ನು ಗಳಿಸಿಕೊಳ್ಳುವುದು ಅವಶ್ಯಕ. ಮೊದಲು

ಮಗುವಿನ ಸಮಸ್ಯೆಯ ಬಗೆಗೆ ಒಪ್ಪಿಕೊಳ್ಳಬೇಕು. ತಮ್ಮ ಮಕ್ಕಳು ಬೇರೆ ಮಕ್ಕಳಂತಿಲ್ಲ ಎಂಬ ಸತ್ಯವನ್ನು ಅರಗಿಸಿಕೊಳ್ಳಲು ನಮಗೆ ಹೆಚ್ಚು ಸಮಯ ಬೇಕಾಗುತ್ತದೆ. ಸಮವಯಸ್ಕರಿಗೆ ಹೋಲಿಸಿದರೆ ತಮ್ಮ ಮಕ್ಕಳು ಬೇರೆ ಮಕ್ಕಳಂತಿಲ್ಲ ಎಂಬ ಸತ್ಯವನ್ನು ಅರಗಿಸಿಕೊಳ್ಳಲು ಪ್ರತಿಯೊಬ್ಬರಿಗೂ ಕಷ್ಟವಾಗುತ್ತದೆ. ಸಮವಯಸ್ಕರಿಗೆ ಹೋಲಿಸಿದರೆ ತಮ್ಮ ಮಕ್ಕಳ ಅಗತ್ಯಗಳು ಬೇರೆ ಎಂಬುದನ್ನು ಒಪ್ಪಿಕೊಳ್ಳಲು ಪೋಷಕರಿಗೆ ತುಂಬಾ ಧೈರ್ಯವೂ ಇರಬೇಕು.

ಮಗುವಿನ ಸಮಸ್ಯೆಯ ಬಗ್ಗೆ ಅರಿವು ಮೂಡಿದ ಮೇಲೆ, ಪೋಷಕರು ತಜ್ಞರ ಸಹಾಯವನ್ನು ಪಡೆಯಬೇಕು. ತಜ್ಞರಲ್ಲಿ ಯಾರು ಅಸಲಿ ಯಾರು ನಕಲಿ, ಯಾರ ಉದ್ದೇಶ ಸಹಾಯ ಮಾಡುವುದು, ಹಣ ಮಾಡುವುದು ಯಾರು ಎಂದು ಸೂಕ್ಷ್ಮವಾಗಿ ತಿಳಿದುಕೊಳ್ಳುವ ಜಾಣತನ ಇರಬೇಕು.

ಹಾಗೆಯೇ ಎಲ್ಲಾ ರೀತಿಯ ತಜ್ಞರು ಹೊರಗಡೆ ಸಿಗುತ್ತಾರಾದರೂ, ಅವರ ಪಾತ್ರಕ್ಕೆ ಮಿತಿ ಇದೆ. ಮಕ್ಕಳ ಚಿಕ್ಕಪುಟ್ಟ ಸಮಸ್ಯೆಗಳನ್ನು ಬಗೆಹರಿಸಲು ಕೆಲವು ಸಲಹೆಗಳನ್ನು ಅವರು ನೀಡಬಹುದು. ಕೆಲವು ನಿಮಗೆ ಹೊಂದಿಕೆಯಾಗಬಹುದು. ಇನ್ನು ಕೆಲವು ನಿಮಗೆ ಹೊಂದಿಕೆಯಾಗದಿರಬಹುದು. ನೀವು ತಜ್ಞರ ಬಳಿಗೆ ಹೋಗುವಾಗ ಅವರ ಸಲಹೆ ತಪ್ಪಾಗಲೂಬಹುದು ಎಂದುಕೊಂಡೇ ಹೋಗಬೇಕು. ನಿಮ್ಮ ಸಮಸ್ಯೆಗಳಿಗೆ ನೀವೇ ಪ್ರಯೋಗ ಮಾಡಿಕೊಂಡು ಸೂಕ್ತ ಪರಿಹಾರ ಏನೆಂದು ಕಂಡು ಹಿಡಿದುಕೊಳ್ಳುವುದು ಉಚಿತ. ಜೊತೆಗೆ ಸಮಾನ ದು:ಖಿಗಳಾದ ಇತರರೊಡಗೂಡಿ ಒಟ್ಟಾಗಿ ಸಮಸ್ಯೆಯ ಪರಿಹಾರಕ್ಕಾಗಿ ಹೋರಾಡುವುದು ಒಳಿತು.

ಕ್ರಮಬದ್ಧ ಅಂತರದಲ್ಲಿ ತಜ್ಞರ ಸಹಾಯವನ್ನು ನಿರೀಕ್ಷಿಸಿ ಹೋಗುವುದು ಸರಿಯಾದರೂ, ಪೋಷಕರು ತಮ್ಮ ಮನೆಯನ್ನೇ ಶಾಲೆಯನ್ನಾಗಿ ಪರಿವರ್ತಿಸುವುದೊಳಿತು. ಊಟ ನಿದ್ದೆಗಷ್ಟೆ ಮನೆ ಸೀಮಿತವಾಗಬಾರದು. ಬದಲಿಗೆ ನ್ಯೂನತೆಯುಳ್ಳ ಮಗುವಿಗೆ ಕಲಿಯುವ, ಆಡುವ ಮತ್ತು ಉತ್ತಮ ಹವ್ಯಾಸ ಬೆಳೆಸಿಕೊಳ್ಳುವ ತಾಣವಾಗಬೇಕು. ಜೊತೆಗೆ ದೈಹಿಕ ಚಟುವಟಿಕೆಗಳು, ಭಾಷೆ, ಸ್ವಕಾರ್ಯ ಮತ್ತು ಸಾಮಾಜಿಕ ಕೌಶಲಗಳನ್ನು ಕಲಿಯುವ ಸ್ಥಳ ಮನೆ ಆಗಬೇಕು. ವಿಶೇಷ ಅಗತ್ಯವಿರುವ ತಮ್ಮ ಮಕ್ಕಳ ಜೊತೆ ಸೇರಿ ಆಸಕ್ತಿಕರವಾದ ಚಟುವಟಿಕೆಗಳನ್ನು ರೂಪಿಸಿ ಮಕ್ಕಳೊಡನೆ ಸಂತೋಷದಿಂದ ಕಾಲ ಕಳೆಯಲು ಪೋಷಕರು ತಮ್ಮ ಬಿಡುವಿಲ್ಲದ ಕಾರ್ಯಕ್ರಮದಿಂದ ಸ್ವಲ್ಪ ಸಮಯವನ್ನು ಮೀಸಲಿಡಬೇಕು. ಎಷ್ಟು ವೇಳೆ ನೀವು ನಿಮ್ಮ ಮಗುವಿನೊಂದಿಗೆ ಕಾಲ ಕಳೆಯುತ್ತೀರಿ ಎನ್ನುವುದಕ್ಕಿಂತ ನೀವು ಆ ಸಮಯವನ್ನು ಹೇಗೆ ಉಪಯೋಗಿಸಿಕೊಳ್ಳುತ್ತೀರಿ ಎಂಬುದು ಇಲ್ಲಿ ಮುಖ್ಯ. ಕೇವಲ ಅರ್ಧ ಗಂಟೆ ನೀವು ಮಗುವಿನೊಡನೆ ಕಾಲ ಕಳೆದರೂ ಸಾಕು. ಮಗುವಿಗೆ ನಿಮ್ಮ ಒಡನಾಟದಿಂದ ಎಷ್ಟು ಕಲಿಯಲು ಸಾಧ್ಯವಾಯಿತು ಎಂಬುದು ಮಾತ್ರ ಇಲ್ಲಿ ಗಣನೆಗೆ ಬರುವುದು.

ನ್ಯೂನತೆಯಿರುವ ಮಗುವಿನಲ್ಲಿ ಅನೇಕ ಕೊರತೆಗಳು, ಅಂತರಗಳು ಇರುತ್ತವೆ. ಅದರಿಂದ ಉದ್ವೇಗಕ್ಕೊಳಗಾಗುವುದು ಬೇಡ. ನಿಮ್ಮ ಮಗುವಿನಲ್ಲಿರುವ ಕೊರತೆಗಳ ಪಟ್ಟಿ ತಯಾರಿಸಿ. ದಿನ ನಿತ್ಯದ ಜೀವನದಲ್ಲಿ ಅಗತ್ಯಕ್ಕೆ ಬರುವ ಕ್ಷೇತ್ರಗಳಲ್ಲಿರುವ



ಕೊರತೆಗಳನ್ನು ಗುರುತಿಸಿ ತಯಾರಿಸಿರುವ ಪಟ್ಟಿ ಇದೆ. ಅವುಗಳನ್ನು ಆಧಾರವಾಗಿಟ್ಟುಕೊಂಡು ನಿಮ್ಮ ಮಗುವಿನ ಕೊರತೆಗಳನ್ನು ಪಟ್ಟಿ ಮಾಡಿ. ಅದಾದ ನಂತರ ಅದರಲ್ಲಿರುವ 4–5 ಕೊರತೆಗಳನ್ನು ಆರಿಸಿಕೊಂಡು ಅವುಗಳನ್ನು ಕಲಿಸಲು ಪ್ರಾರಂಭಿಸಬೇಕು. ಉದಾಹರಣೆಗೆ 'ರಾಜೀವನಿಗೆ ಚಡ್ಡಿ ಹಾಕಲು ಬರುವುದಿಲ್ಲ', 'ಕೆಂಪು ಬಣ್ಣ ಜೋಡಿಸಲು ಆಗುವುದಿಲ್ಲ', ಹುಡುಗ_ಹುಡುಗಿಯರ ವ್ಯತ್ಯಾಸ ತಿಳಿಯುವುದಿಲ್ಲ' ಎಂದಿದ್ದರೆ ಇವುಗಳನ್ನು ಕಲಿಯಲು ಮಕ್ಕಳಿಗೆ ತರಬೇತಿ ನೀಡುವುದನ್ನೇ ನಿಮ್ಮ ಉದ್ದೇಶವಾಗಿಟ್ಟುಕೊಳ್ಳಿ.

ಚಟುವಟಿಕೆಗಳನ್ನು ಆರಿಸಿದ ನಂತರ ಪೋಷಕರು, ತಜ್ಞರು, ಹಾಗೂ ವಿಶೇಷ ಶಿಕ್ಷಕರನ್ನು ಸಂದರ್ಶಿಸಿ ಆ ಚಟುವಟಿಕೆಗಳನ್ನು ಕಲಿಸಲು ನಡೆಸಬೇಕಾದ ಉಪಾಯಗಳು, ಅದಕ್ಕೆ ಬೇಕಾದ ಸಲಕರಣೆಗಳು, ಅನುಸರಿಸಬೇಕಾದ ವಿಧಾನ, ಮಕ್ಕಳಿಗೆ ನೀಡಬೇಕಾದ ಹೆಚ್ಚಿನ ತರಬೇತಿ–ಇವುಗಳ ಬಗ್ಗೆ ಚರ್ಚಿಸಿ. ನ್ಯೂನತೆಯಿರುವ ಮಗುವಿಗೆ ತರಬೇತಿ ನೀಡಲು ವೈಜ್ಞಾನಿಕ ಮನೋಭಾವ, ದೃಢಸಂಕಲ್ಪ– ಇವುಗಳು ಅವಶ್ಯಕ. ಇದರಿಂದ ಮನೆಯಲ್ಲಿ ನೀವು ನೀಡುವ ತರಬೇತಿ ಪರಿಣಾಮಕಾರಿಯಾಗುತ್ತದೆ.

## ನ್ಯೂನತೆಯಿರುವವರ ಬಗೆಗಿರುವ ತಪ್ಪು ಕಲ್ಪನೆಗಳು

ಹಿಂದಿನಿಂದಲೂ ಅಂಗವಿಕಲರನ್ನು ಕಡೆಗಣಿಸಿ ಅಪಾರ್ಥ ಮಾಡಿಕೊಂಡದ್ದೇ ಹೆಚ್ಚು. ಅವರನ್ನು ಸಮಾಜದ ಸದಸ್ಯರು ಮಾತ್ರವಲ್ಲ, ಹತ್ತಿರದ ಕುಟುಂಬದವರೂ ಕೂಡ ತಿರಸ್ಕಾರದಿಂದ ಕಾಣುತ್ತಾರೆ. ತಜ್ಞರ ಸಹಕಾರ ನಿರೀಕ್ಷಿಸುವ ಮುನ್ನ ನ್ಯೂನತೆಯಿರುವ ಮಕ್ಕಳ ಪೋಷಕರು ಆ ಮಕ್ಕಳ ದೃಷ್ಟಿಕೋನದಲ್ಲಿ ಪ್ರಪಂಚವನ್ನು ಅರ್ಥಮಾಡಿಕೊಳ್ಳಬೇಕು. ನಮ್ಮ ದೃಷ್ಟಿಗೂ ಮಗುವಿನ ದೃಷ್ಟಿಗೂ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳಬೇಕು. ಇಲ್ಲದಿದ್ದರೆ ನಿಮ್ಮ ಉದ್ದೇಶ ಸರಿಯಾಗಿದ್ದರೂ, ತಜ್ಞರ ಮಾರ್ಗದರ್ಶನ ಸರಿಯಾಗಿದ್ದರೂ, ತರಬೇತಿ ಫಲಪ್ರದವಾಗುವುದಿಲ್ಲ.

## ಮಗುವಿನ ಪರಿಸ್ಥಿತಿಗೆ ಹಣೆಬರಹ ಕಾರಣವಲ್ಲ.

ಉದಾಹರಣೆಗೆ, ಮಗುವಿನ ಪರಿಸ್ಥಿತಿಗೆ ದೇವರು ಬರೆದ ಹಣೇಬರಹವೇ ಕಾರಣ ಎಂದು ಅಚಲವಾದ ನಂಬಿಕೆ ಇರಿಸಿಕೊಂಡರೆ, ಅವರು ಮಾಡುವ ಎಲ್ಲಾ ತರಬೇತಿ ಚಟುವಟಿಕೆಗಳೂ, ಪರಿಹಾರ ಕ್ರಮಗಳೂ ನಿರ್ಜೀವವಾಗಿರುತ್ತವೆ. ಇದು ದೇವರೇ ನಿರ್ಮಿಸಿದ ಪರಿಸ್ಥಿತಿ. ಇದರಿಂದ ಬಿಡುಗಡೆ ಇಲ್ಲ ಎನ್ನುವುದು ಅವನ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆನಿಂತಿರುತ್ತದೆ. ಇದನ್ನು ತಜ್ಞರು ಅಭ್ಯಸಿಸಿ, ಮಗುವಿನ ಅಭಿವೃದ್ಧಿಗಾಗಿ ಪೋಷಕರಿಗೆ ಸಹಾಯ ಮಾಡಬೇಕು.

## ಅವರಿಗೆ ಕನಿಕರ ಬೇಕಿಲ್ಲ .. ಬೇಕಿರುವುದು ಅವಕಾಶ

ನ್ಯೂನತೆಯುಳ್ಳವರು ಕೆಲವು ಕೆಲಸಗಳನ್ನು ಮಾಡಲು ಅಸಮರ್ಥರು ಎಂಬ ದೃಷ್ಟಿಯೇ ಎಲ್ಲಾ ಅಪಾರ್ಥಗಳಿಗೂ ದಾರಿಮಾಡುತ್ತದೆ. "ಎಷ್ಟೇ ಆದರೂ ಅವನು ಅಂಗವಿಕಲ" ಎಂಬುದು ಸಾಮಾನ್ಯವಾಗಿ ಕೇಳಿಬರುವ ಮಾತು. ಕರುಣೆ, ಕನಿಕರ ಇವುಗಳಿಗೆಲ್ಲ ಅವರ ಅಸಾಮರ್ಥ್ಯವೇ ಕಾರಣವಾಗುತ್ತದೆ. ಅವರಿಗೆ ಬೇಕಿರುವುದು ಕನಿಕರ ಅಲ್ಲ ಬದಲಿಗೆ ಅವಕಾಶ. ನಾವು ಕೆಲಸ ಮಾಡಿಕೊಡುವುದು ಅವರಿಗೆ ಬೇಕಿಲ್ಲ. ಅವರ ಕೆಲಸವನ್ನು ಅವರೇ ಮಾಡಿಕೊಳ್ಳುವಂತಹ ಅವಕಾಶಗಳನ್ನು ಕಲ್ಪಿಸಿಕೊಡಬೇಕು ಎಂಬುದೇ ಅವರ ಆಸೆ. ಊನಗಳು ದೈಹಿಕ ಅನ್ನುವುದಕ್ಕಿಂತ ಹೆಚ್ಚಾಗಿ ಮಾನಸಿಕ ಎಂದು ಕೆಲವರ ವಾದ. ಸಾಮಾಜಿಕ ಕಟ್ಟುಪಾಡಿನಿಂದಾಗಿ ನ್ಯೂನತೆಯಿರುವವರು ಬೇರೆಯವರನ್ನು

ಅವಲಂಬಿಸಬೇಕಾಗುತ್ತದೆ. ಒಂದು ಅವಕಾಶ ಕೊಟ್ಟು ನೋಡಿ. ಇತರರಿಗಿಂತ ಉತ್ತಮ ರೀತಿಯಲ್ಲಿ ನ್ಯೂನತೆಯಿರುವವರು ಕೆಲವು ಕೆಲಸಗಳನ್ನು ಮಾಡುತ್ತಾರೆ. ಎಷ್ಟೋ ಸಲ ತಾಯಂದಿರು ತಮ್ಮ ಮಕ್ಕಳು 'ಅಂಗಿಯ ಗುಂಡಿ ಹಾಕಿಕೊಳ್ಳುವುದಿಲ್ಲ, 'ತಾನೇ ತಿನ್ನುವುದಿಲ್ಲ', 'ಬಟ್ಟೆ ಹಾಕಿಕೊಳ್ಳುವುದಿಲ್ಲ' ಎಂದೆಲ್ಲ ದೂರು ತರುತ್ತಾರೆ. ಚಿಕಿತ್ಸಕರು ಮಗುವಿನಿಂದ ಇವುಗಳನ್ನು ಮಾಡಿಸುವಾಗ ಆಶ್ಚರ್ಯಕರ ರೀತಿಯಲ್ಲಿ ಮಗುವು ಮಾಡಿ ತೋರಿಸಿದ್ದಿದೆ!! ಆದರೂ ತಾಯಿ, ಇಲ್ಲಿ ಮಾಡಿದ ಅಷ್ಟೆ, ಮನೆಯಲ್ಲಿ ಏನೂ ಮಾಡುವುದಿಲ್ಲ' ಎಂದು ತನ್ನನ್ನು ಸಮರ್ಥಿಸಿಕೊಳ್ಳುತ್ತಾರೆ.

### ಸಮಸ್ಯೆ ಮಗುವಿಗಿಂತ ಕುಟುಂಬದಲ್ಲೇ ಇರಬಹುದು.




ಹಲವಾರು ಸಂದರ್ಭಗಳಲ್ಲಿ ಸಮಸ್ಯೆಯು ನ್ಯೂನತೆಯಿರುವವರಲ್ಲಿರುವುದಕ್ಕಿಂತ ಕುಟುಂಬ, ಸಮಾಜ ಇವರಲ್ಲಿ ಇರುತ್ತದೆ. ಅವರಿಗೆ ಏನೂ ಮಾಡಲು ಬರುವುದಿಲ್ಲ ಎಂದು ತಾವೇ ನಿರ್ಧಾರ ಮಾಡಿಕೊಂಡು ಬಿಡುತ್ತಾರೆ. ಇದರಿಂದಾಗಿ ತಮಗೇ ಅರಿವಿಲ್ಲದಂತೆ ಹಿರಿಯರು ಮಕ್ಕಳಿಂದ ಏನೂ ಮಾಡಿಸುವುದಿಲ್ಲ. ಮಗುವಿಗೆ ಕಲಿಯುವ ಸಂದರ್ಭವೇ ಬರದೆ ಇದ್ದುದರಿಂದ ಬೆಳೆದ ಮೇಲೂ ಅವನಿಗೆ ಕೆಲವು ಕೆಲಸಗಳನ್ನು ಸ್ವತಃ ಮಾಡಲಾಗುವುದಿಲ್ಲ. ಅದನ್ನು ನಾವು ಅವನಿಗೆ ನ್ಯೂನತೆ ಇರುವ ಕಾರಣ ಮಾಡಲಾಗುತ್ತಿಲ್ಲ ಎಂದು ಒಪ್ಪಿಕೊಂಡು ಬಿಡುತ್ತೇವೆ. ಇದೊಂದು ವಿಷವರ್ತುಲ ಮತ್ತು ಸ್ವಯಂಕೃತ ಅಪರಾಧ. ಇದು ಒಂದಕ್ಕೊಂದು ಸಂಬಂಧಿಸಿದ ವಿಷಯವಾದ್ದರಿಂದ ಬೆಳೆದಂತೆಯೇ, ಎಲ್ಲಿ ಸರಿಪಡಿಸಬೇಕೆಂದು ತಿಳಿಯದೆ ಹೋಗುತ್ತದೆ. ಎಷ್ಟು ಜನ ಪೋಷಕರು 5 ವರ್ಷದೊಳಗಿನ ತಮ್ಮ ಮಕ್ಕಳಿಗೆ ಕತ್ತರಿ, ಕಾಗದ ಕೊಟ್ಟು ಕತ್ತರಿಸಲು ಹೇಳಿದ್ದಾರೆ? ಬೆಂಕಿ ಕಡ್ಡಿ, ಪೊಟ್ಟಣ ಕೊಟ್ಟು ಕಡ್ಡಿ ಗೀರಲು ಹೇಳಿದ್ದಾರೆ? "ಅಯ್ಯೋ! ಇಲ್ಲ, ಇಲ್ಲ ಅವನು ಏನನ್ನಾದರೂ ಸುಟ್ಟು ಹಾಕಿದರೆ? ಅವನು ಕೈಗಾಯ ಮಾಡಿಕೊಂಡರೆ?" ಇತ್ಯಾದಿ ಅನಗತ್ಯ ಮತ್ತು ಅನಾವಶ್ಯಕ ಪ್ರಶ್ನೆಗಳ ಸುರಿಮಳೆಯಾಗುತ್ತದೆ. ನ್ಯೂನತೆ ಇದೆಯೋ ಇಲ್ಲವೋ, ಎಲ್ಲ ಪುಟ್ಟ ಮಕ್ಕಳಿಗೂ ಅಗತ್ಯವಾಗಿ ಇರಬೇಕಾದ ಮುನ್ನೆಚ್ಚರಿಕೆ ಕೌಶಲಗಳು ಇವು.

### ಅವಕಾಶಗಳ ಅಭಾವಕ್ಕೆ ಶಾಲೆಯೂ ಕಾರಣವಾಗಬಹುದು

ಇಂತಹವರಿಗೆ ಅವಕಾಶಗಳ ಅಭಾವಕ್ಕೆ ಮತ್ತೊಂದು ಕಾರಣವೆಂದರೆ ಇವರನ್ನು ಶಾಲೆಯಲ್ಲಿ ಸಮವಯಸ್ಕರ ಜೊತೆಯ ಆಟ-ಪಾಠಗಳಿಂದ ದೂರ ಇಟ್ಟಿರುವುದು, ಬಹಿಷ್ಕರಿಸುವುದು. ಇತ್ತೀಚೆಗೆ ಕೆಲವೇ ವರ್ಷಗಳ ಹಿಂದೆ ನ್ಯೂನತೆಯುಳ್ಳ ಮಕ್ಕಳನ್ನು ಶಾಲೆಗೆ ಸೇರಲು ಅಸಮರ್ಥರೆಂದು ನಿರ್ಧರಿಸಿದ್ದರು. "ಕ್ಷಮಿಸಿ ಅವನನ್ನು ಶಾಲೆಗೆ ಸೇರಿಸಿಕೊಳ್ಳಲು ಆಗುವುದಿಲ್ಲ" ಅವನು 'ಕುರುಡ', 'ಕಿವುಡ', 'ಕುಂಟ', 'ಹೆಳವ'-ಇತ್ಯಾದಿ ಅನ್ವರ್ಥಗಳನ್ನು ಸರಾಗವಾಗಿ ಉಪಯೋಗಿಸಿ ಅವನ್ನು ದೂರ ಇಡಲಾಗಿತ್ತು. "ಇತರ ಮಕ್ಕಳೊಡನೆ ಅವನು ಹೇಗೆ ಶಾಲೆಗೆ ಹೋಗಬಲ್ಲ?" ಇದು ನ್ಯೂನತೆಯುಳ್ಳ ಮಕ್ಕಳ ಪುನರ್ವಸತಿ ಕಾರ್ಯದಲ್ಲಿ "ಬಹಿಷ್ಕಾರದ" ಹಂತ.

**ಬೇರ್ಪಡಿಸುವಿಕೆಯ (Segregation) ದುಷ್ಪರಿಣಾಮಗಳು**

ಶಿಕ್ಷಕರ ಮತ್ತು ಸಮಾಜದ ಜನರ ದೃಷ್ಟಿಯಲ್ಲಿ ಈ ಮಕ್ಕಳನ್ನು ಶಾಲೆಗೆ ಸೇರಿಸಬಹುದು. ಆದರೆ, ಅವರಿಗೆ ವಿಶೇಷ ಶಾಲೆಗಳಿರಬೇಕು ಎಂಬ ಅಭಿಪ್ರಾಯ ವ್ಯಕ್ತವಾಯಿತು. ಇದಾದ ಮೇಲೆ 'ಕುರುಡರ ಶಾಲೆ', 'ಕಿವುಡರ ಶಾಲೆ' ಎಂಬ ವಿಶೇಷ ಶಾಲೆಗಳು ಸ್ಥಾಪಿತವಾದವು. ಇಂತಹ ಶಾಲೆಗಳೆಲ್ಲ ನಗರದ ಹೊರವಲಯಗಳಲ್ಲಿ ಸ್ಥಾಪಿತವಾದವು. ಏಕೆಂದರೆ, ಬೇರೆ ಸಾಮಾನ್ಯ ಮಕ್ಕಳಿಗೆ ಅವರಿಂದ ತೊಂದರೆಯಾಗಬಾರದಲ್ಲ!! ಈ ಭಾವನೆಗೆ ಮಕ್ಕಳ ಪುನರ್ವಸತಿ ಕಾರ್ಯದಲ್ಲಿ "ಬೇರ್ಪಡಿಸುವುದು" ಎಂದು ಹೇಳಬಹುದು. ಆದರೆ ಬೇರ್ಪಡಿಸಿದ ಮಕ್ಕಳು ಒಂಟಿತನ ಮತ್ತು ಕಳಂಕದಿಂದ ಅತೀವ ದುಃಖಕ್ಕೆ ಒಳಗಾಗುತ್ತಾರೆ. ಸಮಾಜದಲ್ಲಿ ಮಗುವು ಸ್ವತಃ ತಾನು ವಿಶೇಷ ಶಾಲೆಗೆ ಹೋಗುತ್ತೇನೆಂಬ ಕೀಳರಿಮೆಯಿಂದ ನರಳುತ್ತದೆ. ಎಲ್ಲಕ್ಕಿಂತ ಮುಖ್ಯವಾಗಿ ಸಾಮಾನ್ಯ ಮಕ್ಕಳ ಜೊತೆ ಬೆರೆತು ಆಟ, ಸಾಮಾಜಿಕ ಕೌಶಲಗಳನ್ನು ಕಲಿಯುವ ಅವಕಾಶದಿಂದ ವಂಚಿತವಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಬೇರ್ಪಡಿಸುವಿಕೆಯಿಂದ ಮಗುವಿಗೆ ಸಾಮಾನ್ಯನಂತೆ ಇರುವ/ಬೆಳೆಯುವ ಅವಕಾಶವೇ ಸಿಗುವುದಿಲ್ಲ. ಯಾವಾಗಲೂ ಮಗುವು ವಿಶೇಷ ಶಾಲೆಯಲ್ಲೇ ಇರುತ್ತಾನೆ. ಅವನನ್ನು ಎಲ್ಲರೂ 'ವಿಶೇಷ' 'ಬೇರೆ' ವ್ಯಕ್ತಿ ಎಂದೇ ನೋಡುತ್ತಾರೆ. ಇವರನ್ನು ಬೇರ್ಪಡಿಸಿ ಇಡುವುದರಿಂದ ಈ ಮಕ್ಕಳು ತಮ್ಮದೇ ಆದಂತಹ ಗುಣಲಕ್ಷಣ, ನಡವಳಿಕೆ ಮತ್ತು ಸಂಸ್ಕೃತಿಯನ್ನು ಹೊಂದುತ್ತಾರೆ. ಅದರಿಂದಾಗಿಯೂ ಅವರು ಸಮಾಜದ ಇತರ ಮಕ್ಕಳಿಂದ ಬೇರೆ ಎಂಬ ಭಾವನೆ ಬರುತ್ತದೆ. ದೈಹಿಕ, ಭಾವನಾತ್ಮಕ, ಸಾಮಾಜಿಕ ಯಾವುದೇ ರೀತಿಯಲ್ಲಿಯೂ ಈ ಮಕ್ಕಳು ತಮ್ಮ ಜೊತೆಯವರ ಸಂಗಡ ಬೆರೆಯುವ ಸಾಧ್ಯತೆ ಇಲ್ಲ. ಆದ್ದರಿಂದ, ಇತ್ತೀಚಿನ ದಿನಗಳಲ್ಲಿ ಸರಕಾರ ಮತ್ತು ಶಾಸನ ಮಾಡುವವರು ಪ್ರಪಂಚದಾದ್ಯಂತ ನ್ಯೂನತೆಯುಳ್ಳವರಿಗೆ ಹೊಂದುವಂತೆ ಶಾಲಾ ಪರಿಸರವನ್ನು ಮಾರ್ಪಡಿಸುವುದೆಂದರೆ ದೊಡ್ಡ ಮೊತ್ತದ ಹಣವನ್ನು ವಿನಿಯೋಗಿಸಿ ಕಡಿಮೆ ಲಾಭ ಪಡೆದಂತೆ ಎಂದೇ ಭಾವಿಸಿದ್ದಾರೆ.

**ಸಮನ್ವಯತೆಯೇ (Integration) ಸರಿಯಾದ ಮಾರ್ಗ**

ಇತ್ತೀಚಿನ ಬೆಳವಣಿಗೆ ಏನೆಂದರೆ ನ್ಯೂನತೆಯಿರುವ ಮಕ್ಕಳನ್ನು ಅವರ ಜೊತೆಯ ಬೇರೆ ಮಕ್ಕಳೊಂದಿಗೆ ಬೆರೆಯುವಂತೆ ಅವಕಾಶ ನೀಡುವುದಕ್ಕೆ ಆದ್ಯತೆ. ಇದನ್ನು ಸಮನ್ವಯತೆ ಎನ್ನುತ್ತಾರೆ. ಇದರಿಂದಾಗಿ ನ್ಯೂನತೆಯಿರುವ ಮಕ್ಕಳು ನ್ಯೂನತೆ ಇಲ್ಲದವರ ಜೊತೆ ಹತ್ತಿರದಿಂದ ನೋಡಿ, ಕಲಿಯುವ ಸೌಲಭ್ಯ ಸಿಗುತ್ತದೆ. ಈ ಮನೋಭಾವದ ಮೂಲ ಉದ್ದೇಶವೇನೆಂದರೆ ನ್ಯೂನತೆಯಿರುವ ಮಕ್ಕಳಿಗೆ ಸಹಾ ಎಲ್ಲರಂತೆ ಶಾಲೆಗೆ ಬರುವ ಸಂದರ್ಭ ಸಿಗಬೇಕು ಎಂಬುದು. ಆದರೆ ಪರಿಸರಕ್ಕೆ ಹೊಂದಿಸಿಕೊಳ್ಳುವ ಗುರುತರ ಜವಾಬ್ದಾರಿ ಮಗುವಿನ, ಮಗುವಿನ ಪೋಷಕರ ಮೇಲೆ ಬೀಳುತ್ತದೆಯೇ ಹೊರತು ಶಾಲೆ, ಶಿಕ್ಷಕರ ಮೇಲಲ್ಲ.

**ಸಮಗ್ರ (Inclusive) ಶಿಕ್ಷಣ**

ನ್ಯೂನತೆಯುಳ್ಳ ಮಕ್ಕಳನ್ನು ಮುಖ್ಯವಾಹಿನಿಯಲ್ಲಿ ಬೆರೆಸುವ ಇತ್ತೀಚಿನ ಬೆಳವಣಿಗೆಯ ಪ್ರಕಾರ, ಶಿಕ್ಷಣ ತಜ್ಞರು 'ಸಮಗ್ರ' ಎನ್ನುವ ಪದವನ್ನು ಬಳಸಲು ಇಚ್ಛಿಸುತ್ತಾರೆ. ಇದರ ಅರ್ಥವೇನೆಂದರೆ ಮಗುವನ್ನು ಶಾಲೆಗೆ ಸ್ವಾಗತಿಸುವುದು ಮಾತ್ರವಲ್ಲ. ಶಾಲಾ ಶಿಕ್ಷಕರು, ಪಠ್ಯವಸ್ತು, ಶಾಲೆಯ ಭೌತಿಕ ರೀತಿ ನೀತಿ ಎಲ್ಲವೂ ಮಗುವಿನ ವಿಶೇಷ ಅಗತ್ಯಕ್ಕೆ ಪೂರಕವಾಗಿ ಸ್ಪಂದಿಸಬೇಕು ಎಂದು. ಹೀಗೆ ವಿಶೇಷ ಮಕ್ಕಳ ಅಗತ್ಯಗಳಿಗೆ ಹೊಂದಿಕೊಳ್ಳುವ ಜವಾಬ್ದಾರಿ ಶಾಲೆ ಮತ್ತು ಮಕ್ಕಳ ಮೇಲೆ ಸಮವಾಗಿ ಹಂಚಿಕೆಯಾಗುತ್ತದೆ.

**ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಹೀಗೆ ಗುರುತಿಸಲೇಬೇಕೆ?**




ವಿಶೇಷ ಅಗತ್ಯವುಳ್ಳ ಮಕ್ಕಳನ್ನು ಸೂಚಿಸಲು ಬಳಸುವ ಪದಗಳು ಸುಮಾರಾಗಿ ಸಾರ್ವಜನಿಕ ತಪ್ಪು ಕಲ್ಪನೆಗೆ ಮತ್ತು ಅಭಿಪ್ರಾಯಕ್ಕೆ ಕಾರಣವಾಗಿದೆ. ಹಿಂದೆ ಸಮಾಜದಲ್ಲಿ ಬುದ್ಧಿಮಾಂದ್ಯರನ್ನು 'ಮೂರ್ಖ' 'ಪೆದ್ದ' 'ಬುದ್ಧಿಹೀನ' ಎಂದು ಕರೆಯುತ್ತಿದ್ದರು. ಚಲನೆಯ ತೊಂದರೆಯಿರುವ ಮಗುವನ್ನು 'ಕುಂಟ' 'ಹೆಳವ' ಎಂದೂ, ಶ್ರವಣದೋಷವಿರುವವರನ್ನು 'ಕಿವುಡ' 'ಮೂಗ' ಎಂದೂ ದೃಷ್ಟಿದೋಷವಿರುವವರನ್ನು 'ಕುರುಡ' ಎಂದೂ ಕರೆಯುತ್ತಿದ್ದರು. ಇಂತಹ ಪದಗಳ ಬಳಕೆಗಳು ಈಗ ನಿಷೇಧಿಸಲ್ಪಟ್ಟಿವೆ. ಮತ್ತು ಅದು ಅವಹೇಳನಕಾರಿಯಾಗಿದೆ. ನಾವು ಅವರನ್ನು ಕುಂಟ, ಕುರುಡ, ಕಿವುಡ ಎಂದು ಸಂಬೋಧಿಸಿದರೆ ಅದರ ಅರ್ಥ ಸಮಸ್ಯೆಯ ಮೂಲವೆಲ್ಲ ಅವರಲ್ಲಿದೆ ಎಂದಾಗುತ್ತದೆ. ಅದು ಕರುಣೆ, ಕನಿಕರ, ದಯೆ, ಅಸಹನೆ ಮತ್ತು ಪರಿಹಾಸ್ಯ/ಅಣಕಗಳನ್ನು ಎತ್ತಿ ತೋರಿಸುತ್ತವೆ. ಆದ್ದರಿಂದ ಇತ್ತೀಚಿನ ದಿನಗಳಲ್ಲಿ ತಟಸ್ಥ ಭಾವನೆಯನ್ನು ಸಾರುವ ಬೌದ್ಧಿಕವಾಗಿ ಅಥವಾ ದೈಹಿಕವಾಗಿ 'ಸವಾಲಾಗಿರುವವರು' ಎಂಬಂಥಹ ಪದಗಳ ಬಳಕೆಯನ್ನು ಸ್ವಾಗತಿಸಲಾಗಿದೆ. ವ್ಯಕ್ತಿಯ ಮೇಲೆ ಕೇಂದ್ರೀಕೃತವಾಗಿರುವ ಇಂತಹ ಪದಗಳು ನ್ಯೂನತೆಯನ್ನು ಎತ್ತಿ ಹಿಡಿಯುವುದಿಲ್ಲ.

ಜನರಿಗೆ ಹಣೆಪಟ್ಟಿ ಹಚ್ಚುವ ಕಾಯಕದ ವಿರುದ್ಧ ಪ್ರಬಲವಾದ ಒಂದು ಚಳುವಳಿಯೇ ನಡೆಯುತ್ತಿದೆ. ಅವರ ಪ್ರಕಾರ ಜಾಡಿಗಳಿಗೆ ಹಣೆಪಟ್ಟಿ ಅಂಟಿಸಬೇಕೇ ಹೊರತು ಮನುಷ್ಯರಿಗಲ್ಲ. ತಪ್ಪು ಹಣೆಪಟ್ಟಿಗಳು, ಶೀಘ್ರರೋಗ ನಿರ್ಧಾರ, ಪದೇ ಪದೇ ಮಾಡುವ ಪರೀಕ್ಷೆಗಳು, ಕೂಲಂಕಷ ತಪಾಸಣೆಗಳು ಮತ್ತು ಇಂತಹದ್ದೇ ಇತರ ಪರೀಕ್ಷೆಗಳು ಮೊದಲೇ ಜರ್ಝರಿತರಾದ ಪೋಷಕರ ನೊಂದ ಮನಸ್ಸನ್ನು ಇನ್ನಷ್ಟು ಘಾಸಿಗೊಳಿಸುತ್ತವೆ. ಉರಿಯುವ ಗಾಯಕ್ಕೆ ಉಪ್ಪು ಸವರಿದಂತೆ ಆಗುತ್ತದೆ. ಈ ರೋಗನಿದಾನದ ಹಣೆ ಪಟ್ಟಿಗಳನ್ನು ನಾವು ಮಗುವಿನ ಶಕ್ತಿ – ದೌರ್ಬಲ್ಯಗಳನ್ನು ತಿಳಿಸಿಕೊಡುವ ಮಾನದಂಡವೆಂದು ಸಕಾರಾತ್ಮಕವಾಗಿ ತಿಳಿದುಕೊಳ್ಳಬೇಕು. ನಾವು ಆ ಪದಗಳಿಗೆ ಹೆಚ್ಚಿನ ಅರ್ಥ ಹುಡುಕಲು ಹೋಗುವುದಾಗಲೀ ಅಪಾರ್ಥ ಮಾಡಿಕೊಳ್ಳುವುದಾಗಲಿ ಮಾಡಬಾರದು.

ಮಗುವಿನ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಮತ್ತು ಸಹಾಯ ಮಾಡಲು ತಂದೆ ತಾಯಿಯರಿಗೆ ಒಂದು ದಾರಿ ದೀಪದಂತೆ ಇಂತಹ ಪದಗಳು ಅಷ್ಟೇ. ಮಗುವಿನ ಭವಿಷ್ಯವನ್ನು ನಿರ್ಧರಿಸಿ ಅವನ ಎದುರೇ ಈ ಪದಗಳನ್ನು ಬಳಸಿ ಮನಸ್ಸಿಗೆ ಘಾಸಿಗೊಳಿಸಬೇಡಿ. ಈ ಮೊದಲೇ ತಿಳಿಸಿದಂತೆ ಹಲವಾರು ನ್ಯೂನತೆಗಳನ್ನು ಮತ್ತು ಅಪಾಯದ ಅಂಚಿನಲ್ಲಿರುವ ಮಕ್ಕಳನ್ನು ಚಿಕ್ಕ ವಯಸ್ಸಿನಲ್ಲೇ ಗುರುತಿಸಿ ಪರಿಹಾರ ಒದಗಿಸಿದ್ದೇ ಆದರೆ ಮಗು ಬೆಳೆದಂತೆ ಆ ದೋಷದ ಚಿಹ್ನೆಯು ಕಾಣದಾಗುವುದು. ನ್ಯೂನತೆಗಳುಳ್ಳ ಮಗು ಮತ್ತು ಅಪಾಯದ ಅಂಚಿನಲ್ಲಿರುವ ಮಗು ಇವರಿಬ್ಬರ ಮಧ್ಯೆ ಅಜಗಜಾಂತರವಿದೆ. ಈ ವ್ಯತ್ಯಾಸವನ್ನು ಗಮನಿಸಿ ಆದಷ್ಟೂ ಬೇಗನೆ ಮಕ್ಕಳಲ್ಲಿರುವ ತೊಂದರೆಯನ್ನು ಗುರುತಿಸಿ ಉತ್ತಮ ಅವಕಾಶಗಳನ್ನು ಕೊಟ್ಟಿದ್ದೇ ಆದರೆ ಹಸುಳೆಗಳು ಮತ್ತು ಶಾಲಾ ಪೂರ್ವ ವಯಸ್ಸಿನ ಮಕ್ಕಳು ಬಹಳ ಪರಿಣಾಮಕಾರಿಯಾದ ಬೆಳವಣಿಗೆಯನ್ನು ತೋರಿಸುತ್ತಾರೆ.

## ಸ್ವ–ಅಧ್ಯಯನ

| ಕ್ರ. ಸಂ. | ವಾಕ್ಯಗಳು | ಸರಿ/ತಪ್ಪು |
|---|---|---|
| 1. | ನ್ಯೂನತೆಯಿರುವ ಮಕ್ಕಳಿಗೆ ಪ್ರೀತಿ, ವಿಶ್ವಾಸ ಮತ್ತು ಸ್ನೇಹದ ಅಗತ್ಯವಿದೆ. | |
| 2. | ಹಿಂದಿನ ಜನ್ಮದ ಪಾಪದ ಫಲವೇ ಅಂಗವಿಕಲತೆ. | |
| 3. | ಅಂಗವಿಕಲ ಮಕ್ಕಳ ಮಧ್ಯದಲ್ಲಿರುವ ಗರ್ಭಿಣಿ ಹೆಂಗಸಿಗೆ ಅಂತಹದ್ದೇ ಮಕ್ಕಳು ಹುಟ್ಟುವ ಸಾಧ್ಯತೆ ಹೆಚ್ಚು. | |
| 4. | ಗರ್ಭಿಣಿ ಹೆಂಗಸರಿಗೆ ನ್ಯೂನತೆ ಉಳ್ಳವರ ಸಹವಾಸ ಇರಬಾರದು. | |
| 5. | ಕ್ಷುದ್ರ ಶಕ್ತಿಗಳ ಪ್ರಭಾವದಿಂದ ಅಂಗವಿಕಲತೆ ಉಂಟಾಗುತ್ತದೆ. | |
| 6. | ನ್ಯೂನತೆಯುಳ್ಳ ಕುಟುಂಬದವರೊಂದಿಗೆ ಮದುವೆ – ಸಂಬಂಧ ಬೆಳೆಸದಿರುವುದೊಳಿತು. | |
| 7. | ನ್ಯೂನತೆಯಿಲ್ಲದ ಸಾಮಾನ್ಯ ಮಕ್ಕಳೊಡನೆ ಇರುವುದಕ್ಕಿಂತ ನ್ಯೂನತೆಯುಳ್ಳವರನ್ನು ಬೇರೆ ಶಾಲೆ/ವಸತಿ ಗೃಹದಲ್ಲಿ ಇಡುವುದು ಸರಿ. | |
| 8. | ಸೂರ್ಯ ಗ್ರಹಣದ ಸಮಯದಲ್ಲಿ ಹೊರಗೆ ಹೋದ ಗರ್ಭಿಣಿ ಹೆಂಗಸು ಅಂಗವಿಕಲ ಮಗುವಿಗೆ ಜನ್ಮ ನೀಡುವ ಸಂಭವವಿದೆ. | |
| 9. | ಅಂಗವಿಕಲ ಮಕ್ಕಳು ಕೆಲಸ ಮಾಡಲು ಕಷ್ಟಪಡುವುದನ್ನು ನೋಡುವುದಕ್ಕಿಂತಲೂ ಅವರ ಎಲ್ಲಾ ಕೆಲಸಗಳನ್ನು ನಾವೇ ಮಾಡಿಕೊಡುವುದು ಉತ್ತಮ. | |
| 10. | ಅಂಗವಿಕಲರನ್ನು ಕರುಣೆ ಮತ್ತು ಕನಿಕರದಿಂದ ನೋಡಬೇಕು. | |
| 11. | ಅಂಗವಿಕಲರನ್ನು ಹೀಯಾಳಿಸಿದರೆ ನಿಮಗೆ ಮುಂದೆ ಇಲ್ಲವೆ ಮರು ಜನ್ಮದಲ್ಲಿ ಅದೇ ರೀತಿ ಆಗುತ್ತದೆ. | |
| 12. | ಪ್ರಾಥಮಿಕ ನ್ಯೂನತೆಯ ಕಾರಣದಿಂದ ಅಂಗವಿಕಲ ಮಕ್ಕಳಲ್ಲಿ ಸಿಟ್ಟು, ಬೇಸರ, ಮತ್ಸರ, ಹೊಟ್ಟೆಕಿಚ್ಚು ಇವು ಕಂಡು ಬರುತ್ತವೆ. | |
| 13. | ವಿಶೇಷ ಅಗತ್ಯವುಳ್ಳ ಮಕ್ಕಳ ಕ್ಷೇಮಾಭಿವೃದ್ಧಿಗಾಗಿ ಎಲ್ಲಾ ಜವಾಬ್ದಾರಿಯುತ ಪ್ರಜೆಯೂ ತನ್ನ ಸಂಪಾದನೆಯಲ್ಲಿ ಒಂದಂಶವನ್ನು ವಿನಿಯೋಗಿಸಬೇಕು. | |
| 14. | ವಿಶೇಷ ಅಗತ್ಯವುಳ್ಳ ಮಕ್ಕಳ ಕೆಲಸಗಳನ್ನು ನಾವು ಮಾಡಿಕೊಳ್ಳುವುದಕ್ಕಿಂದ ಅವರೇ ಮಾಡಿಕೊಳ್ಳುವಂತೆ ಅವಕಾಶಗಳನ್ನು ಕಲ್ಪಿಸಿಕೊಡುವುದು ಅಗತ್ಯ. | |
| 15. | 'ಅಸಮರ್ಥರು' ಎಂದು ಕರೆಯುವುದಕ್ಕಿಂತ ಅವರನ್ನು 'ಭಿನ್ನ ಸಮರ್ಥರು' ಎಂದು ಹೇಳುವುದು ಉತ್ತಮ. | |

## ಅಧ್ಯಾಯ–2

# ಪೋಷಕರಿಗೆ ಮಾರ್ಗದರ್ಶನದ ಅಗತ್ಯ

ಪುನರ್ವಸತಿ ಕಲ್ಪಿಸುವವರು ಮತ್ತು ಶಿಕ್ಷಕರಿಗಿಂತ ಪೋಷಕರು ತಮ್ಮ ವಿಶೇಷ ಅಗತ್ಯವುಳ್ಳ ಮಕ್ಕಳ ಜೊತೆ ಕಳೆಯುವ ವೇಳೆ ಹೆಚ್ಚು. ಆದ್ದರಿಂದ ಮನೆಯಲ್ಲೂ ನ್ಯೂನತೆಯುಳ್ಳ ಮಗುವಿಗೆ ಉತ್ತಮ ಸೌಲಭ್ಯ ನೀಡಬೇಕಾಗುತ್ತದೆ. ಪೋಷಕರು ತಮ್ಮ ಸಮಯ ಮತ್ತು ಸಂಪನ್ಮೂಲವನ್ನು ಸರಿಯಾಗಿ ಉಪಯೋಗಿಸಿಕೊಳ್ಳುವಂತೆ ಅವರಿಗೆ ಮಾರ್ಗದರ್ಶನ ಬೇಕಾಗುತ್ತದೆ. ಆದ್ದರಿಂದ ಇಂತಹ ಶಿಕ್ಷಕರು, ಪೋಷಕರ ಜೊತೆ ಮಾತನಾಡಿ ಮಾರ್ಗದರ್ಶನ ನೀಡಬೇಕಾಗುತ್ತದೆ.



ಮಗುವಿನಲ್ಲಿ ನ್ಯೂನತೆಯಿರಬಹುದೆಂಬ ನಿಮ್ಮ ಶಂಕೆಯನ್ನು ನೀವು ಪೋಷಕರಿಗೆ ಹೇಳಿದರೆ ಅವರು ಅದನ್ನು ಒಪ್ಪುವುದಿಲ್ಲ. ಇಂತಹ ವಿಷಯಗಳನ್ನು ಒಪ್ಪಿಕೊಳ್ಳುವುದಕ್ಕೆ ಮುನ್ನ ಅವರು ಹಲವಾರು ರೀತಿಯ ಮಾನಸಿಕ ಅಸಮತೋಲನಗಳಿಂದ ತಲ್ಲಣಿಸುತ್ತಾರೆ. ಅಲ್ಲಗಳೆಯುವಿಕೆ, ಆಘಾತ, ತಲ್ಲಣ, ಕೀಳರಿಮೆ, ತಪ್ಪಿತಸ್ಥ ಭಾವನೆ, ಗೊಂದಲಗಳಿಂದ ತೊಳಲುತ್ತಾರೆ. ಮಗುವಿನಲ್ಲಿ ದೋಷವಿದೆ ಎಂದು ತಿಳಿದಿರುವ ಇಲ್ಲವೇ ತಿಳಿದಿಲ್ಲದಿರುವ ಪೋಷಕರಿಬ್ಬರಿಗೂ ಆತಂಕ, ದಿಗ್ಭ್ರಮೆ, ಹತಾಶೆ, ಇವುಗಳಿಂದ ಬಿಡುಗಡೆ ಇಲ್ಲ. ಮಗುವಿಗೆ ಏನೋ ದೋಷವಿದೆ ಎಂದು ತಿಳಿದಾಗ ತಾಯಂದಿರು (ತಂದೆಗಿಂತ ಹೆಚ್ಚಾಗಿ) ನೋವು, ಅಸಹಾಯಕತೆ, ಅಸಮಾಧಾನ, ಆಶಾಭಂಗ ಮತ್ತು ಅಪರಿಪೂರ್ಣತೆಗಳನ್ನು ತೋರಿಸುತ್ತಾರೆ. ಮಗುವಿಗೆ ಈ ತೊಂದರೆ ಏಕಾದರೂ ಬಂತೋ ಎಂದು ಕೊಳ್ಳುವರು, ಅಥವಾ ಮನಸ್ಸಿನಲ್ಲಿಯೇ ಅತೀವ ನೋವನ್ನು ಅನುಭವಿಸುವವರನ್ನು ನಾವು ಸಮಾಜದಲ್ಲಿ ಕಾಣುತ್ತೇವೆ. ಮಗುವನ್ನು ದೂರಮಾಡುವರು ಎಂದಲ್ಲ. ಅಥವಾ ಮಗುವಿನ ನ್ಯೂನತೆಗೆ ಕಾರಣಗಳನ್ನು ಹುಡುಕುವುದು, ಸಂದೇಹ, ತಪ್ಪಿತಸ್ಥ ಭಾವನೆ ಹೊಂದುವುದು ಅಥವಾ ಗೊಂದಲಪಡುವುದು ತಪ್ಪಲ್ಲ. ಇದು ಬಹುತೇಕ ಎಲ್ಲಾ ತಂದೆ ತಾಯಂದಿರ ಒಂದು ಸಾಧಾರಣ ನಡವಳಿಕೆ.

ನ್ಯೂನತೆಯುಳ್ಳ ಮಗುವನ್ನು ಸ್ವೀಕರಿಸುವಲ್ಲಿ ಬೇರೆ ಬೇರೆ ರೀತಿಯ ಭಾವನಾತ್ಮಕ ಹಾಗೂ ಬೌದ್ಧಿಕ ವರ್ತನೆಯನ್ನು ಪೋಷಕರು ತೋರಿಸುತ್ತಾರೆ. ಕೆಲವು ವೇಳೆ ತಂದೆ ಒಪ್ಪಿಕೊಂಡರೂ ತಾಯಿ ಅದನ್ನು ನಿರಾಕರಿಸುತ್ತಾಳೆ. ಬೇರೆ ತಜ್ಞರನ್ನು ಸಂದರ್ಶಿಸುವಂತೆ ಒತ್ತಾಯಿಸುತ್ತಾಳೆ. ಆಕೆಗೆ ತನ್ನ ಮಗುವಿಗೆ ನ್ಯೂನತೆ ಇದೆ ಎಂದು ಕಲ್ಪಿಸಿಕೊಳ್ಳಲೂ ಸಾಧ್ಯವಾಗುವುದಿಲ್ಲ ಏಕೆ?

ಪ್ರತಿಯೊಬ್ಬ ಪೋಷಕನೂ ತಮ್ಮ ಮಗುವಿನ ಭವಿಷ್ಯದಲ್ಲಿ ಅಗಾಧ ನಿರೀಕ್ಷೆಯನ್ನು ಇಟ್ಟುಕೊಂಡಿರುತ್ತಾರೆ. ಯಾರಾದರೂ ಒಬ್ಬರಿಂದ ಮಗುವಿನ ತೊಂದರೆಯು ಗುಣವಾಗಬಹುದೆಂದು ಅವರಿಗೆ ಅನ್ನಿಸುವುದು ಸಹಜ. ಈ ಹಂತದಲ್ಲಿ ಪೋಷಕರನ್ನು ನಿಭಾಯಿಸುವುದು ಎಲ್ಲ ವೃತ್ತಿ ನಿರತ ತಜ್ಞರ ಕರ್ತವ್ಯ.

**ಇಂತಹ ಮಕ್ಕಳ ಬಗ್ಗೆ ಪೋಷಕರ ಮೊದಲ ಪ್ರತಿಕ್ರಿಯೆ**

1) ತಲ್ಲಣ.
2) ಖಿನ್ನತೆ.
3) ತಪ್ಪಿತಸ್ಥ ಭಾವನೆ.
4) ಆಶಾಭಂಗ.
5) ಭಯ.
6) ಆತಂಕ.
7) ಗೊಂದಲ.
8) ಏನೂ ತಿಳಿಯದಾಗುವುದು.
9) ಪ್ರತಿಕ್ರಿಯೆ ಇಲ್ಲ.

**ಇಂತಹ ಮಕ್ಕಳನ್ನು ಗಮನಿಸಲು, ತರಬೇತಿ ನೀಡಲು ಪೋಷಕರಿಗಿರುವ ಅಡ್ಡಿ ಆತಂಕಗಳು**

1) ಕೆಲಸದ ಒತ್ತಡ.
2) ಬೇರೆ ಮಕ್ಕಳ ಬೇಡಿಕೆಗಳು.
3) ಸ್ವಾಭಾವಿಕ ಮತ್ತು ತೀವ್ರಗತಿಯ ಪ್ರಗತಿಯ ನಿರೀಕ್ಷೆ.
4) ಮಗುವಿನ ಅನಾರೋಗ್ಯ.
5) ತನ್ನ ಅನಾರೋಗ್ಯ.
6) ಕುಟುಂಬದವರ ಒತ್ತಾಸೆ.
7) ನೆರೆಹೊರೆಯವರ ಸಹಕಾರ.
8) ಒಡಹುಟ್ಟಿದವರ ಒತ್ತಾಸೆ/ಸಹಕಾರ.
9) ಕೈ ಹಿಡಿದವರ ಸಹಕಾರ.
10) ತರಬೇತಿ ನೀಡಲು ಬೇಕಾದ ಸಾಮಗ್ರಿ ಇಲ್ಲದಿರುವುದು.
11) ಸಹಾಯ ನೀಡುವ ಸಂಸ್ಥೆಗಳು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲದಿರುವುದು.
12) ತಜ್ಞರ ಮಾರ್ಗದರ್ಶನ ಸಮಯಕ್ಕೆ ಸರಿಯಾಗಿ ಸಿಗದಿರುವುದು.
13) ಮನೆಯಲ್ಲಿ ತರಬೇತಿ ನೀಡಲು ಕೊನೆಯ ಆದ್ಯತೆ.

14) ಮಗುವನ್ನು ಪೋಷಿಸುವಲ್ಲಿ ಇರುವ ಬಹುರೀತಿಯ ಜವಾಬ್ದಾರಿಗಳು.
15) ತಾನು ವ್ಯಯಿಸುವ ಶಕ್ತಿ ಸಮಯಗಳಿಗೆ ಸರಿಯಾದ ಪ್ರೋತ್ಸಾಹ ಇಲ್ಲದಿರುವುದು.
16) ಮನೆ ಕೆಲಸಕ್ಕೆ ಸಾಕಷ್ಟು ಸಮಯವಿಲ್ಲದಿರುವುದು.
17) ತನ್ನ ಬಗೆಗೆ ಆಸಕ್ತಿ/ಪ್ರೇರಣೆ ಇಲ್ಲದಿರುವುದು.
18) ತನಗೆ ತರಬೇತಿಯ ಬಗ್ಗೆ ಸಾಕಷ್ಟು ಜ್ಞಾನ, ತಿಳುವಳಿಕೆ, ಕೌಶಲ ಇಲ್ಲ ಎಂಬ ಭಾವನೆ.
19) ಮಗುವಿನಲ್ಲಿ ಕಂಡು ಬರುವ ವರ್ತನಾ ಸಮಸ್ಯೆಗಳು.
20) ಬೇರೆ ಬೇರೆ ರೀತಿಯ ಅಥವಾ ಬೇಗ ಫಲಿತಾಂಶ ನೀಡುವ ತರಬೇತಿಯ ನಿರಂತರ ಅನ್ವೇಷಣೆ
21) ಹಣದ ಅಡಚಣೆ.
22) ಮಗುವಿನ ಪಾಲನೆ ಪೋಷಣೆಯ ಬಗ್ಗೆ ಪುಸ್ತಕಗಳಿಲ್ಲದಿರುವುದು.
23) ಮನೆಗೆ ಆಗಾಗ್ಗೆ ಬಂದು ಹೋಗುವ ಬಂಧುಗಳು.
24) ಆಮಂತ್ರಣವಿಲ್ಲದೆ ಪದೇ ಪದೇ ಮನೆಗೆ ಬರುವ ಜನರು.
25) ಮಗುವಿನ ಸಾಮರ್ಥ್ಯದ ಬಗ್ಗೆ ಸರಿಯಾಗಿ ತಿಳುವಳಿಕೆ ಇಲ್ಲದಿರುವದು.
26) ತರಬೇತಿ ಕೊಡಲು ತಕ್ಕ ಶಿಕ್ಷಣ ಅಥವಾ ತರಬೇತಿಯ, ಅಥವಾ ತಿಳುವಳಿಕೆಯ ಕೊರತೆ.

**ಅವರು ಯಾವುದಕ್ಕೆ ಪ್ರಾಮುಖ್ಯತೆ ನೀಡುತ್ತಾರೆ?**

1) ಮಗುವಿನ ರೂಪ.
2) ಮಗುವಿನ ಸಮಸ್ಯೆಯ ಪೂರ್ಣ ಪರಿಹಾರಕ್ಕಾಗಿ ತಕ್ಷಣ ಕೈಗೊಳ್ಳಬಹುದಾದ ಶಸ್ತ್ರ ಚಿಕಿತ್ಸೆ.
3) ಬೇರೆ ಮಕ್ಕಳಂತೆ 'ಸಾಮಾನ್ಯ' ಎಂದು ಯಾವಾಗ ಎನಿಸಿಕೊಳ್ಳುತ್ತಾನೋ ಎಂಬ ಆತಂಕ
4) ಬೇರೆಯವರಂತೆ ತನ್ನನ್ನು ತಾನು ನೋಡಿಕೊಳ್ಳುತ್ತಾನೆಯೋ ಎಂಬ ಶಂಕೆ.
5) ಕೈ ಹಿಡಿದವರು ಮತ್ತು ಒಡ ಹುಟ್ಟಿದವರ ಪ್ರತಿಕ್ರಿಯೆ ಹೇಗಿರುತ್ತದೋ ಎಂಬ ಚಿಂತೆ.
6) ಜೀವನ ಪೂರ್ತಿ ಒಡಹುಟ್ಟಿದವರು, ಮಗುವಿನ ಜವಾಬ್ದಾರಿಯನ್ನು ತೆಗೆದುಕೊಳ್ಳುತ್ತಾರೊ ಇಲ್ಲವೊ ಎಂಬ ಅನುಮಾನ.
7) ಮಗುವು ಇರುವ ಸ್ಥಿತಿಯಲ್ಲಿ ಅವನನ್ನು ಕುಟುಂಬದ ಇತರ ಸದಸ್ಯರು ಮತ್ತು ಬಂಧುಗಳು ಒಪ್ಪಿಕೊಳ್ಳುತ್ತಾರೊ ಇಲ್ಲವೊ ಎಂಬ ಭಯ.
8) ಮುಂದೆ ಮತ್ತೊಂದು ಮಗುವು ಹುಟ್ಟಿದರೆ ಅದೂ ಇದೇ ರೀತಿ ನ್ಯೂನತೆಯಿಂದ ಕೂಡಿರುತ್ತದೋ ಎಂಬ ಭಯ.
9) ಮಗುವಿಗೆ ನ್ಯೂನತೆಯಿರುವುದರಿಂದ ಸ್ನೇಹಿತರು ಮತ್ತು ನೆರೆಹೊರೆಯವರು ತಮ್ಮನ್ನು ಗೌರವಿಸುವುದಿಲ್ಲ ಎಂಬ ಸಂಕೋಚ.
10) ವಯಸ್ಸಿಗೆ ಸಹಜವೆಂಬಂತೆ ಶಾಲೆಗೆ ಹೋಗಲು ಮಗುವಿಗೆ ಸಾಧ್ಯವಿದೆಯೋ ಇಲ್ಲವೋ ಎಂಬ ಅನಿಶ್ಚಿತತೆ.
11) ವಂಶಾಭಿವೃದ್ಧಿಯ ಬಗ್ಗೆ ಕಾಳಜಿ.
12) ಒಡಹುಟ್ಟಿದವರ ಮದುವೆಯ ಬಗ್ಗೆ ಆತಂಕ.
13) ವಂಶಪಾರಂಪರ್ಯವಾಗಿ ಬಂದ ಆಸ್ತಿಯನ್ನು ನೋಡಿಕೊಂಡು ರಕ್ಷಿಸಲು ಸಾಮರ್ಥ್ಯ ಇದೆಯೋ ಎಂಬ ಅನುಮಾನ.
14) ಮಗುವಿನ ಆಯಸ್ಸಿನ ಬಗ್ಗೆ ಶಂಕೆ.

15) ಮುಂದಿನ ಪೀಳಿಗೆಗೂ ಈ ತೊಂದರೆ ಬರಬಹುದೆಂದು ಅಂಜಿಕೆ.
16) ತಮ್ಮ ಹಿಂದಿನ ಪಾಪ ಕರ್ಮಗಳ ಫಲವೇ ಈ ಮಗು ಎಂಬ ತಪ್ಪಿತಸ್ಥ ಭಾವನೆ.
17) ದೇವರು, ನಕ್ಷತ್ರ, ಗ್ರಹಗಳ ದೋಷದಿಂದ ಕುಟುಂಬದಲ್ಲಿ ಈ ರೀತಿ ಆಗಿದೆ ಎಂಬ ಖೇದ/ಪಶ್ಚಾತಾಪ.
18) ಕೈ ಹಿಡಿದವರು, ಅತ್ತೆ ಮಾವಂದಿರು, ಮತ್ತು ಕುಟುಂಬದವರು ಅವರವರಲ್ಲೇ ತಪ್ಪು ಹುಡುಕುವುದು.
19) ತಮ್ಮ ಕಾಲ ಕಳೆದ ನಂತರ ಮಗುವಿಗೆ ಸಾಮಾಜಿಕ ರಕ್ಷಣೆ ಸಿಗುತ್ತದೋ ಇಲ್ಲವೋ ಎಂಬ ಭಾವನೆ.
20) ಮಗುವಿಗೆ ಸೂಕ್ತ ವೈದ್ಯಕೀಯ ಚಿಕಿತ್ಸೆ/ತರಬೇತಿ ಫಲಕಾರಿಯಾಗುತ್ತದೆಯೋ ಇಲ್ಲವೋ ಎಂಬ ಅನುಮಾನ.

ಮಗುವಿನ ಪರಿಸ್ಥಿತಿಯನ್ನು ದಯವಿಟ್ಟು ತಾಳ್ಮೆಯಿಂದ ಮನದಟ್ಟು ಮಾಡಿಕೊಳ್ಳಿ "ಏಕೆ ಹೀಗಾಯಿತು" ಎಂದು ಚಿಂತಿಸುವುದರ ಬದಲು "ನಾನೇನು ಮಾಡಬಹುದು" ಎಂದು ಯೋಚಿಸಿ, ಕಾರ್ಯಪ್ರವೃತ್ತರಾಗಿ. ಧೈರ್ಯದಿಂದ ತರಬೇತಿ ಪ್ರಾರಂಭಿಸಿ, ದಾರಿ ತಾನಾಗಿಯೇ ನಿಮ್ಮ ಮುಂದೆ ಬರುತ್ತದೆ. ಬೇರೆ ಪೋಷಕರ ಶಿಕ್ಷಕರ ಅನುಭವವನ್ನು ತಿಳಿದುಕೊಂಡು ಮುಂದುವರಿಯಿರಿ.

**ಆದರೆ ನಿಜಕ್ಕೂ ಅವರು ಯಾವುದಕ್ಕೆ ಪ್ರಾಮುಖ್ಯತೆ ನೀಡಬೇಕು?**

1) ಪುನರ್ವಸತಿ ಸೌಲಭ್ಯ ಮತ್ತು ಇತರ ಚಿಕಿತ್ಸೆ, ತರಬೇತಿ ನೀಡುವ ವಿವಿಧ ಸಂಘ ಸಂಸ್ಥೆಗಲ ಬಗ್ಗೆ ಮಾಹಿತಿ.
2) ವಿಕಾಸದ ಗತಿಯಲ್ಲಿ ಉಂಟಾಗುವ ನ್ಯೂನತೆಗಳ ಬಗೆಗೆ ತಿಳಿಸುವ ಪುಸ್ತಕಗಳು.
3) ಕೇಂದ್ರ/ರಾಜ್ಯ ಸರಕಾರಗಳಿಂದ ಸಿಗುವ ಸೌಲಭ್ಯ/ರಿಯಾಯಿತಿ.
4) ಇದೇ ರೀತಿ ತೊಂದರೆಯನ್ನು ಅನುಭವಿಸುತ್ತಿರುವ ಇತರ ಪೋಷಕರ ಸಂಪರ್ಕ.
5) ಮಗುವಿನ ತರಬೇತಿಯ ಬಗ್ಗೆ ಸೂಕ್ತ ಮಾರ್ಗದರ್ಶನ.
6) ವೃತ್ತಿ ಶಿಕ್ಷಣ ಮಾಹಿತಿ, ಮತ್ತು ಯೋಜನೆ.
7) ಮದುವೆ ಮತ್ತು ಲೈಂಗಿಕತೆಯ ಬಗ್ಗೆ ತಿಳುವಳಿಕೆ.
8) ವಸತಿ ಸೌಲಭ್ಯ.
9) ಹಣಕಾಸಿನ ನೆರವು.
10) ಭವಿಷ್ಯ.
11) ಕೌಟುಂಬಿಕ ಸಂಬಂಧಗಳು.
12) ಅನುವಂಶೀಯತೆ ಬಗ್ಗೆ ಮಾರ್ಗದರ್ಶನ.

ಪ್ರಾಶಸ್ತ್ಯಕ್ಕೆ ಅನುಸಾರವಾಗಿ ಮಗುವಿನ ಏಳಿಗೆಗೆ ಬೇಕಾಗುವ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಿ. ತಜ್ಞರ ಮಾರ್ಗದರ್ಶನ ಪಡೆಯಲು ಹಿಂಜರಿಯದಿರಿ. ಅವರು ಹೇಳಿದ ರೀತಿಯಲ್ಲಿ ಚಟುವಟಿಕೆಗಳನ್ನು ಮಾಡುತ್ತಾ, ಕ್ರಮಬದ್ಧವಾಗಿ ಅವರ ಬಳಿ ಮಗುವನ್ನು ತೋರಿಸಿ ಮಗುವಿನ ಪ್ರಗತಿಯ ಬಗ್ಗೆ ಚರ್ಚಿಸಿ.

## ಅಧ್ಯಾಯ–3

# ಭಾರತ ಸರಕಾರ ವಿಶೇಷ ಅಗತ್ಯವಿರುವ ಮಕ್ಕಳಿಗೆ ಏನೇನು ಮಾಡಿದೆ?

ಸ್ವಾತಂತ್ರ್ಯ ಪೂರ್ವದಲ್ಲಿ ಅಂಗವಿಕಲರಿಗೆ ಸರಕಾರದ ವತಿಯಿಂದ ಯಾವುದೇ ಸೌಲಭ್ಯ ಇರಲಿಲ್ಲ. ಅಂಗವಿಕಲರ ಪುನರ್ವಸತಿಯ ಬಗೆಗೆ ಸಾರ್ವಜನಿಕರಲ್ಲಿಯೇ ಆಗಲಿ ಅಥವ ತೊಂದರೆಗೆ ಒಳಗಾದವರಿಂದಲೇ ಆಗಲಿ ಯಾವುದೇ ಕೋರಿಕೆ ಇರಲಿಲ್ಲ. 1950 ರಲ್ಲಿ ದೇಶದ ಸಾಮಾಜಿಕ, ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸುವ ಸಮಾನ ಹಕ್ಕು ಅವರಿಗೂ ಇದೆ ಎಂದು ಸರಕಾರ ಮೊಟ್ಟ ಮೊದಲಿಗೆ ಗುರುತಿಸಿತು. ಕೇಂದ್ರ–ರಾಜ್ಯ ಸರಕಾರಗಳು, ಸಮಾಜದ ಈ ಗುಂಪಿನವರ ಅಭಿವೃದ್ಧಿಗಾಗಿ ತಮ್ಮ ಧ್ವನಿ ಎತ್ತುವ ಮೊದಲೇ ಭಾರತದ ಸಂವಿಧಾನ ಇದನ್ನು ಅನುಮೋದಿಸಿತ್ತು.

ಸ್ವಾತಂತ್ರ್ಯ ಭಾರತದಲ್ಲಿ ದೇಶದ ವಿವಿಧ ಮೂಲೆಗಳಲ್ಲಿ ಅಂಗವಿಕಲರ ತರಬೇತಿ ಮತ್ತು ಕ್ಷೇಮಾಭಿವೃದ್ಧಿ ಸಂಸ್ಥೆಗಳನ್ನು ಸ್ಥಾಪಿಸಿತು. ನಂತರ ಇತ್ತೀಚಿನ ದಿನಗಳಲ್ಲಿ ಭಾರತ ಸರಕಾರ ಮತ್ತೆ ಅಂಗವಿಕಲರ ಕಲ್ಯಾಣಕ್ಕಾಗಿ ಯೋಜನೆಗಳನ್ನು ಹಮ್ಮಿಕೊಂಡು ಅವರ ಅಭಿವೃದ್ಧಿಯನ್ನು ಕೈಗೆತ್ತಿಕೊಂಡಿದೆ.

ಅಂತರ ರಾಷ್ಟ್ರೀಯ ಅಂಗವಿಕಲರ ವರ್ಷವು (1981) ಭಾರತ ಸರ್ಕಾರದ ಗಮನವನ್ನು ಅಂಗವಿಕಲರ ಸಮಸ್ಯೆಗಳೆಡೆಗೆ ಸೆಳೆಯಲು ಸಹಕಾರಿಯಾಯಿತು. ಅಂತರ ರಾಷ್ಟ್ರೀಯ ಸಂಸ್ಥೆಗಳ ಒತ್ತಡಕ್ಕೆ ಮಣಿದು ಕೊನೆ ಘಳಿಗೆಯಲ್ಲಿ ಗಡುವುಗಳನ್ನು ಇರಿಸಿಕೊಂಡು ಅಂಗವಿಕಲರ ಕ್ಷೇಮಕ್ಕಾಗಿ ಶಾಸನ, ಕಾನೂನು–ಕಾಯಿದೆಗಳನ್ನು ರೂಪಿಸಿತು.

ಸರಕಾರಗಳು ಕಾನೂನು ನಿಯಮಗಳನ್ನು ರೂಪಿಸಿದೆ. ಹೌದು, ಆದರೆ ನಮಗೂ ಹಕ್ಕುಗಳು, ಸೌಲಭ್ಯಗಳು ಇವೆ ಎಂದು ಕುಳಿತಲ್ಲೇ ಸಂತೋಷ ಪಟ್ಟರೆ ಸಾಲದು. ಯಾವುದೇ ಸೌಲಭ್ಯ ತಾನಾಗಿ ಬಂದು ನಮ್ಮ ಮಡಿಲಿಗೆ ಬೀಳುವುದಿಲ್ಲ. ಅಂಗವಿಕಲರು ಅವಕಾಶ ವಂಚಿತರಾಗಲು ಸಮಾಜ ಪರೋಕ್ಷವಾಗಿ ಕಾರಣವಾದರೆ, ನಮ್ಮ ಮೌಢ್ಯ ಪ್ರತ್ಯಕ್ಷ ಕಾರಣ.

ಮೊದಲಿಗೆ, ನಮ್ಮ ಸರಕಾರ ಅಂಗವಿಕಲರಿಗೆ ಸಹಾಯ ಮಾಡುವ ಉದ್ದೇಶದಿಂದ ಮಾಡಿರುವ ಕಾನೂನು, ಶಾಸನ, ಕಾಯಿದೆಗಳ ಪರಿಚಯ ನಮಗಿರಬೇಕು. ಆಗ ಅವುಗಳನ್ನು ಪಡೆಯಲು ಏನು ಮಾಡಬೇಕು ಎಂದು ಯೋಚಿಸಬಹುದು. ಕೆಲವು ಕ್ಷೇತ್ರಗಳಲ್ಲಿ ನಿಷ್ಠಾವಂತ, ಕಾರ್ಯದಕ್ಷ ಅಧಿಕಾರಿಗಳು ಸೌಲಭ್ಯಗಳನ್ನು ಅಂಗವಿಕಲರಿಗೆ

ಮುಟ್ಟಿಸುವಲ್ಲಿ ಸಫಲರಾಗುತ್ತಾರೆ. ಆದರೂ ಹೆಚ್ಚಿನಂಶ ಅಂಗವಿಕಲರ ಏಳಿಗೆಗಾಗಿ ಶ್ರಮಿಸುವ ಸಂಘ ಸಂಸ್ಥೆಗಳು ಹೋರಾಟ ನಡೆಸಿ ಅವರಿಗೆ ಹಕ್ಕು ಮತ್ತು ಸೌಲಭ್ಯಗಳನ್ನು ಮುಟ್ಟಿಸಬೇಕಿದೆ. ಈ ಕೆಳಗೆ ಭಾರತ ಸರ್ಕಾರ ರೂಪಿಸಿರುವ ಕೆಲವು ಮುಖ್ಯ ಕಾಯಿದೆಗಳ ಪರಿಚಯವನ್ನು ಮಾಡಲಾಗಿದೆ.

## A.ಅಂಗವಿಕಲರ (ಸಮಾನ ಅವಕಾಶ, ಹಕ್ಕುಗಳ ಸಂರಕ್ಷಣೆ ಮತ್ತು ಪೂರ್ಣ ವಿಕಾಸ) ಕಾಯಿದೆ 1995.

**ಕಾಯಿದೆಯ ಉದ್ದೇಶ:**

**ಅಂಗವಿಕಲರ ಬಗ್ಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳ ಹೊಣೆಯನ್ನು ನಿಗದಿ ಪಡಿಸಿ, ಸರಕಾರಗಳು ತಮ್ಮ ಶಕ್ತ್ಯಾನುಸಾರ ಅಂಗವಿಕಲರಿಗೆ ವಿವಿಧ ಸೇವೆಗಳನ್ನು ಒದಗಿಸಿ, ಸೌಲಭ್ಯಗಳನ್ನು ಕಲ್ಪಿಸಿ, ಅವರು ಎಲ್ಲಾ ಕ್ಷೇತ್ರಗಳಲ್ಲೂ ಭಾಗವಹಿಸುವಂತೆ ಮಾಡಲು ನೆರವು ನೀಡುವುದು ಮತ್ತು ತಮ್ಮ ಸಾಮರ್ಥ್ಯಕ್ಕೆ ಅನುಸಾರವಾಗಿ ಎಲ್ಲಾ ರೀತಿಯಲ್ಲಿ, ಎಲ್ಲ ಕ್ಷೇತ್ರಗಳಲ್ಲಿ ಭಾಗವಹಿಸಲು ಅವರ ಅಂಗವಿಕಲತೆ ಅಡ್ಡಿಬಾರದಂತೆ ಸರಕಾರ ಹೊಣೆ ವಹಿಸುವುದು.**

ಕಾಯಿದೆಯ ಅನ್ವಯ ಕಾರ್ಯಕ್ರಮಗಳನ್ನು ರೂಪಿಸಲು ಕರ್ನಾಟಕ ಸರಕಾರ ರಾಜ್ಯ ಸಂಯೋಜನಾ ಸಮಿತಿ ಹಾಗೂ ರಾಜ್ಯ ಕಾರ್ಯಕಾರಿ ಸಮಿತಿಗಳನ್ನು ರಚಿಸಿದೆ. ಈ ಕಾನೂನು ಮತ್ತು ಕಾಯಿದೆಗಳನ್ನು ಜಾರಿ ಮಾಡಲು ಒಬ್ಬ ಆಯುಕ್ತರನ್ನು ನೇಮಿಸಿದೆ. ಅಂಗವಿಕಲರಿಗಾಗಿ ರೂಪಿಸಿರುವ ಕಾರ್ಯಕ್ರಮಗಳ ಸಂಯೋಜನೆ, ಅವುಗಳಿಗೆ ನಿಗದಿ ಪಡಿಸಿರುವ ಹಣದ ಬಳಕೆ, ನಿರ್ವಹಣೆ ಮತ್ತು ಅಂಗವಿಕಲರಿಗೆ ಅವರ ಹಕ್ಕು ಮತ್ತು ಸೌಲಭ್ಯಗಳು ತಲುಪುವಂತೆ ನೋಡಿಕೊಳ್ಳುವುದು ಆಯುಕ್ತರ ಕರ್ತವ್ಯ.

**ಸುತ್ತೋಲೆಗಳಿಲ್ಲದಿದ್ದರೆ ಕಾನೂನು ನೀಡಿರುವ ಹಕ್ಕುಗಳು ಗಗನ ಕುಸುಮ. ಆದ್ದರಿಂದ ಸುತ್ತೋಲೆ ಹೊರಡಿಸುವಂತೆ ಸರಕಾರದ ಮೇಲೆ ಒತ್ತಡ ತರುವ ಕೆಲಸವನ್ನೂ ನಾವೇ ಮಾಡಬೇಕಾಗುತ್ತದೆ.**

22–12–1995 **ರಲ್ಲಿ ಜಾರಿಗೆ ಬಂದ ಈ ಕಾಯಿದೆಯ ಪ್ರಕಾರ ಅಂಗವಿಕಲರು ಎಂದರೆ ಈ ಕೆಳಗಿನವರು.**

a) ಅಂಧತ್ವ:– ಸಂಪೂರ್ಣ ದೃಷ್ಟಿ ಇಲ್ಲದಿರುವುದು.

b) ಮಂದದೃಷ್ಟಿ:– ಸೂಕ್ತ ಸಲಕರಣೆಯ ಸಹಾಯದಿಂದ ಇರುವ ಅಲ್ಪದೃಷ್ಟಿಯಿಂದ ನಿಗದಿತ ಕೆಲಸ ಮಾಡುವವರು.

c) ಕುಷ್ಟರೋಗದಿಂದ ವಿಕಲರಾಗಿರುವುದು: ಕುಷ್ಟರೋಗ ಗುಣವಾಗಿದ್ದು, ಕೈಕಾಲಿನಲ್ಲಿ ಸ್ಪರ್ಶಾನುಭವ ಇಲ್ಲದಿರುವುದು, ಕಣ್ಣಿನ ಸ್ನಾಯುಗಳಲ್ಲಿ ಪಾರ್ಶ್ವವಾಯು ಉಂಟಾಗಿರುವುದು ಅಥವಾ ಅಂಗಾಂಗಗಳು ವಿಕೃತವಾಗಿದ್ದರೂ, ಸಾಕಷ್ಟು ಚಲಿಸಲು ಸಾಧ್ಯವಿದ್ದು ಕೆಲಸಗಳನ್ನು ಮಾಡಲು ಸಾಧ್ಯವಿರುವುದು ಮತ್ತು ತೀರ ವಿಕೃತಿ ಹೊಂದಿ ಜೀವನೋಪಾಯಕ್ಕೆ ಕೆಲಸ ಮಾಡಲು ಆಗದಿರುವುದು.

d ) ಶ್ರವಣದೋಷ:– ಸಾಧಾರಣ ಸಂಭಾಷಣೆ (60 ಡೆಸಿಬೆಲ್) ಅಥವಾ ಹೆಚ್ಚಿನ ಶಬ್ದ ಕೇಳದಿರುವುದು.

e) ಚಲನೆಯಲ್ಲಿ ನ್ಯೂನತೆ:- ಮೂಳೆಗಳ ಅಥವಾ ಮಾಂಸ ಖಂಡಗಳಲ್ಲಿನ ನ್ಯೂನತೆಯಿಂದ ಕೈಕಾಲುಗಳ ಅಶಕ್ತತೆ.

f) ಸೆರೆಬ್ರಲ್ ಪಾಲ್ಸಿ/ಮಿದುಳುವಾತ:- ಮಿದುಳಿಗೆ ಆಗಿರುವ ಆಘಾತದಿಂದ ಶಾಶ್ವತ ಅಂಗವಿಕಲತೆ

g) ಮನೋರೋಗ:- ಬುದ್ಧಿಮಾಂದ್ಯತೆಯನ್ನು ಹೊರತುಪಡಿಸಿದ ಯಾವುದೇ ಮನೋರೋಗ

h) ಬುದ್ಧಿಮಾಂದ್ಯತೆ:- ಬುದ್ಧಿ ಬೆಳವಣಿಗೆ ಕುಂಠಿತವಾಗಿರುವುದು.

ಕಾನೂನಿನ ಪ್ರಕಾರ ಈ ಮೇಲಿನ ಅಂಗವಿಕಲತೆ ಶೇಕಡಾ 40% ಕ್ಕೂ ಹೆಚ್ಚಿನ ಪ್ರಮಾಣದಲ್ಲಿದೆ ಎಂದು ವೈದ್ಯಾಧಿಕಾರಿಯಿಂದ ಪ್ರಮಾಣ ಪತ್ರ ಹೊಂದಿರುವ ವ್ಯಕ್ತಿಗಳು ಅಂಗವಿಕಲರು ಎನ್ನಿಸಿಕೊಳ್ಳುತ್ತಾರೆ.

## ಕಾಯಿದೆಯ ಕಾರ್ಯ ಕ್ಷೇತ್ರ

**ಅಂಗವಿಕಲತೆಯನ್ನು ತಡೆಗಟ್ಟುವುದು ಮತ್ತು ಪ್ರಾರಂಭದಲ್ಲೇ ಪತ್ತೆ ಹಚ್ಚುವುದು.**

1. ಅಂಗವಿಕಲತೆಗೆ ಕಾರಣಗಳನ್ನು ಕಂಡು ಹಿಡಿಯಲು ಸಮೀಕ್ಷೆ, ತಪಾಸಣೆ ಮತ್ತು ಸಂಶೋಧನೆ ಕೈಗೊಳ್ಳುವುದು.
2. ಅಂಗವಿಕಲತೆ ತಡೆಗಟ್ಟುವ ಕ್ರಮಗಳಿಗೆ ಉತ್ತೇಜನ ನೀಡುವುದು.
3. ಅಪಾಯದ ಅಂಚಿನಲ್ಲಿರುವ ಮಕ್ಕಳನ್ನು ಪತ್ತೆ ಹಚ್ಚಲು ಪ್ರತಿ ವರ್ಷ ಮಕ್ಕಳ ತಪಾಸಣೆ ನಡೆಸುವುದು.
4. ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸಿಬ್ಬಂದಿಗೆ ಅಂಗವಿಕಲತೆ ಬಗ್ಗೆ ತರಬೇತಿ ಏರ್ಪಡಿಸುವುದು.
5. ಆರೋಗ್ಯ, ಸ್ವಚ್ಛತೆ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು.
6. ಗರ್ಭಾವಸ್ಥೆ, ಹೆರಿಗೆ, ಮತ್ತು ನಂತರ ಶಿಶು ಮತ್ತು ತಾಯಿಗೆ ಅಗತ್ಯ ಶುಶ್ರೂಷೆ.
7. ಶಾಲೆಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಗ್ರಾಮ ಸೇವಕರು ಮತ್ತು ಅಂಗನವಾಡಿಗಳ ಮೂಲಕ ಸಾರ್ವಜನಿಕರಲ್ಲಿ ಅರಿವು ಮೂಡಿಸುವುದು.
8. ಸಮೂಹ ಮಾಧ್ಯಮಗಳ ಮೂಲಕ ಅಂಗವಿಕಲತೆಯನ್ನು ತಡೆಗಟ್ಟುವ ಬಗ್ಗೆ ಕಾರ್ಯಕ್ರಮಗಳನ್ನು ನಡೆಸುವುದು.

**ಶಿಕ್ಷಣ**

1. ಅಂಗವಿಕಲರಿಗೆ 18 ವರ್ಷ ವಯಸ್ಸಿನವರೆಗೆ ಉಚಿತ ಶಿಕ್ಷಣ.
2. ಅನೌಪಚಾರಿಕ ಶಿಕ್ಷಣ ವ್ಯವಸ್ಥೆ.
3. ಸಮನ್ವಯ ಶಾಲೆಗಳಿಗೆ ಉತ್ತೇಜನ.
4. ಸಮವಸ್ತ್ರ ಪಠ್ಯ ಪುಸ್ತಕಗಳ ಉಚಿತ ವಿತರಣೆ.
5. ಪಠ್ಯಕ್ರಮದಲ್ಲಿ ಸೂಕ್ತ ಮಾರ್ಪಾಡು.
6. ವಿಶೇಷ ಶಾಲೆಗಳಲ್ಲಿ ವೃತ್ತಿಪರ ತರಬೇತಿಗೆ ಸೌಲಭ್ಯ.
7. ಅಂಗವಿಕಲ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ.
8. ಮುಕ್ತ ಶಾಲೆ ಹಾಗೂ ಮುಕ್ತ ವಿಶ್ವವಿದ್ಯಾಲಯಗಳ ಸ್ಥಾಪನೆ.
9. ವಿವಿಧ ರೀತಿಯ ವೈಕಲ್ಯತೆಗಳಿಗೆ ಸೂಕ್ತ ಸಂಚಾರ ವ್ಯವಸ್ಥೆ.
10. ಶಾಲಾ ಕಾಲೇಜು ಮತ್ತು ಸಾರ್ವಜನಿಕ ಕಟ್ಟಡಗಳನ್ನು ಅಂಗವಿಕಲರ ಚಲನೆಗೆ ಅಡಚಣೆಯಾಗದಂತೆ ವಿನ್ಯಾಸಗೊಳಿಸುವುದು.

## ಉದ್ಯೋಗ

1. ಅಂಗವಿಕಲರಿಗೆ ಮೀಸಲಾಗಿಡಬಹುದಾದ ಹುದ್ದೆಗಳನ್ನು ಗುರುತಿಸಬೇಕು.
2. ಇವು ಒಟ್ಟು ಹುದ್ದೆಯ ಶೇಕಡ 3ರಷ್ಟಿರಬೇಕು. 1% ಅಂಧರು ಹಾಗೂ ಮಂದ ದೃಷ್ಟಿಯವರಿಗೆ 1% ಶ್ರವಣ ದೋಷವುಳ್ಳವರಿಗೆ 1% ಚಲನೆಯನ್ನು ನ್ಯೂನತೆಯುಳ್ಳವರಿಗೆ.
3. ಭರ್ತಿ ಆಗದೆ ಉಳಿದಿರುವ ಹುದ್ದೆಗಳನ್ನು ಅಂಗವಿಕಲರಿಗೆ ನೀಡಬೇಕು.
4. ವಿಶೇಷ ಉದ್ಯೋಗ ವಿನಿಮಯ ಕೇಂದ್ರಗಳ ಮೂಲಕ ಅಂಗವಿಕಲರಿಗೆ ಮಾಹಿತಿ, ವಿವರ ಒದಗಿಸಬೇಕು.
5. ಬಡತನ ನಿವಾರಣಾ ಯೋಜನೆಯನ್ನು 3% ಅಂಗವಿಕಲರಿಗೆ ಮೀಸಲಿಡಬೇಕು.

## ಸಮ ದೃಷ್ಟಿ

1. ಸರಕಾರಿ ಸಂಚಾರ ವಾಹನಗಳಲ್ಲಿ ಹತ್ತಿ ಇಳಿಯಲು ವಿಶೇಷ ಸೌಕರ್ಯ ಕಲ್ಪಿಸಬೇಕು.
2. ರಸ್ತೆ ದಾಟುವೆಡೆ ಅಂಧರಿಗೆ ಶಬ್ದದೊಡನೆ ಬರುವ ಹಸಿರು ದೀಪ, ಉಬ್ಬು ತಗ್ಗುಗಳಿರುವ ಬಿಳಿ ಪಟ್ಟಿ ಮಾಡಬೇಕು.
3. ಗಾಲಿ ಕುರ್ಚಿ ಚಲಿಸಲು ಇಳಿಜಾರು.
4. ಅಂಗವಿಕಲರಿಗೆ ಸೂಕ್ತ ಮುನ್ನೆಚ್ಚರಿಕೆಯ ಫಲಕಗಳು.
5. ವಿಶೇಷ ಶೌಚಾಲಯಗಳ ನಿರ್ಮಾಣ.
6. ಕೆಲಸದಲ್ಲಿ ಅಂಗವಿಕಲತೆಯುಂಟಾದರೆ ಕೆಲಸದಿಂದ ತೆಗೆದು ಹಾಕುವುದಿಲ್ಲ ಅನ್ನುವ ಭರವಸೆ.
7. ಅಂಗವಿಕಲತೆಯ ಕಾರಣದಿಂದ ಬಡ್ತಿ ನಿರಾಕರಿಸುವಂತಿಲ್ಲ.
8. ದೃಷ್ಟಿ ದೋಷವುಳ್ಳವರಿಗೆ 10ನೇ ತರಗತಿಯ ಪರೀಕ್ಷೆಯಲ್ಲಿ 1 ಗಂಟೆ ಹೆಚ್ಚು ಕಾಲಾವಕಾಶ.
9. ಶ್ರವಣ ದೋಷವುಳ್ಳವರಿಗೆ ಒಂದೇ ಭಾಷೆಯ ಕಲಿಕೆಗೆ ಸಮ್ಮತಿ.
10. ಕಲಿಕಾ ನ್ಯೂನತೆಯಿದ್ದರೆ ಪರೀಕ್ಷೆಯಲ್ಲಿ ಬರೆಯಲು ಒಂದು ಗಂಟೆ ಹೆಚ್ಚು ಕಾಲಾವಕಾಶ.

## ಅಂಗವಿಕಲರಿಗೆ ವಿದ್ಯಾರ್ಥಿವೇತನ (ಕರ್ನಾಟಕ ಸರ್ಕಾರ)

| | | |
|---|---|---|
| 1–5 ತರಗತಿ | – | ತಿಂಗಳಿಗೆ ರೂ. 50 |
| 6–10 ತರಗತಿ | – | ತಿಂಗಳಿಗೆ ರೂ. 100 |
| ಪಿ.ಯು.ಸಿ ವರೆಗೆ | – | ತಿಂಗಳಿಗೆ ರೂ. 150 |
| ಪದವಿ ಶಿಕ್ಷಣ | – | ತಿಂಗಳಿಗೆ ರೂ. 200 |
| ಸ್ನಾತಕೋತ್ತರ ಶಿಕ್ಷಣ | – | ತಿಂಗಳಿಗೆ ರೂ. 250 |
| ವೃತ್ತಿ ಶಿಕ್ಷಣ | – | ತಿಂಗಳಿಗೆ ರೂ. 300 |



**ಪ್ರೋತ್ಸಾಹ ಧನ**

| | | |
|---|---|---|
| 10ನೇ ತರಗತಿಯಲ್ಲಿ ಶೇಕಡಾ 60ಕ್ಕಿಂತ ಹೆಚ್ಚು ಅಂಕ ಗಳಿಸಿದವರಿಗೆ | – | ರೂ. 500 |
| ಪಿ.ಯು.ಸಿ.ಯಲ್ಲಿ ಶೇಕಡಾ 60ಕ್ಕಿಂತ ಹೆಚ್ಚು ಅಂಕ ಗಳಿಸಿದವರಿಗೆ | – | ರೂ. 750 |
| ಪದವಿ ಪರೀಕ್ಷೆಯಲ್ಲಿ ಶೇಕಡಾ 60ಕ್ಕಿಂತ ಹೆಚ್ಚು ಅಂಕ ಗಳಿಸಿದವರಿಗೆ | – | ರೂ. 1000 |
| ಸ್ನಾತಕೋತ್ತರ ಪರೀಕ್ಷೆಯಲ್ಲಿ ಶೇಕಡಾ 60ಕ್ಕಿಂತ ಹೆಚ್ಚು ಅಂಕ ಗಳಿಸಿದವರಿಗೆ | – | ರೂ. 1200 |
| ತಾಂತ್ರಿಕ, ಕೃಷಿ, ವೈದ್ಯಕೀಯ ಶೇಕಡಾ 60ಕ್ಕಿಂತ ಹೆಚ್ಚು ಅಂಕ ಗಳಿಸಿದವರಿಗೆ | – | ರೂ. 1500 |

**ಪುನರ್ವಸತಿ**

a) ಸಾಧನ ಸಲಕರಣೆಗಳ ವಿತರಣೆ:– ತಜ್ಞರ ಸಲಹೆಯ ಮೇರೆಗೆ ಉಚಿತವಾಗಿ ವಿತರಿಸಲಾಗುವುದು (ಶ್ರವಣ ಸಾಧನ, ಬ್ರೈಲ್ ಗಡಿಯಾರ, ತ್ರಿಚಕ್ರದ ಸೈಕಲ್, ಕ್ರಚೆಸ್, ಕ್ಯಾಲಿಪರ್ಸ, ಗಾಲಿ ಕುರ್ಚಿ, ಕೃತಕ ಕೈ ಕಾಲು). ಇದಕ್ಕಾಗಿ ಕೇಂದ್ರ ಸರಕಾರದ ನೆರವಿನೊಂದಿಗೆ ಜಿಲ್ಲಾ ಪುನರ್ವಸತಿ ಕೇಂದ್ರಗಳು ಕಾರ್ಯ ನಿರ್ವಹಿಸುತ್ತಲಿವೆ.

b) ಸಾಮಾಜಿಕ ಭದ್ರತೆ:– ರೂ.6000 ಕ್ಕಿಂತ ಕಡಿಮೆ ವರಮಾನ ಇರುವ 16 ವರ್ಷಕ್ಕೂ ಮೇಲ್ಪಟ್ಟ ಅಂಗವಿಕಲರಿಗೆ ತಿಂಗಳಿಗೆ ರೂ.125 ಪೋಷಣಾ ಭತ್ಯೆಯನ್ನು ನೀಡಲಾಗುತ್ತಿದೆ.

c) ಗುರುತಿನ ಚೀಟಿ:– ಅಂಗವಿಕಲರು ಸೌಲಭ್ಯಗಳನ್ನು ಪಡೆದುಕೊಳ್ಳಲು ಅನುಕೂಲವಾಗುವಂತೆ ಅವರಿಗೆ ಗುರುತಿನ ಚೀಟಿಗಳನ್ನು ವಿತರಿಸಲಾಗುತ್ತದೆ.

d) ಕ್ರೀಡೆ, ಕಲೆಗೆ ಪ್ರೋತ್ಸಾಹ:– "ಸಾಧನೆ" ಹಾಗೂ "ಪ್ರತಿಭೆ" ಕಾರ್ಯಕ್ರಮದಡಿಯಲ್ಲಿ ಕಲಾವದರಿಗೆ ಧನ ಸಹಾಯ.

## B. ರಾಷ್ಟ್ರೀಯ ಟ್ರಸ್ಟ್ ಕಾಯಿದೆ 1999

ತಮ್ಮ ಹಿತಾಸಕ್ತಿಗಳನ್ನು ಸ್ವತಃ ನೋಡಿಕೊಳ್ಳಲಾಗದ ಗಂಭೀರ ಮತ್ತು ತೀವ್ರ ತರದ ಮಾನಸಿಕ ಮತ್ತು ಶಾರೀರಿಕ ವಿಕಲತೆಯುಳ್ಳವರ ರಕ್ಷಣೆಗಾಗಿ (ಬುದ್ಧಿ ಮಾಂದ್ಯತೆ, ಮಿದುಳುವಾತ, ಆಟಿಸಂ ಮತ್ತು ಬಹುರೂಪ ಅಂಗವಿಕಲತೆಯುಳ್ಳವರ ಕಲ್ಯಾಣಕ್ಕಾಗಿ) ಈ ಕಾಯಿದೆಯನ್ನು ಹೊರಡಿಸಲಾಯಿತು.

**ಇದು ಈ ಕೆಳಗೆ ವಿವರಿಸಲಾದ ಅಂಗವಿಕಲರಿಗೆ ಅನ್ವಯಿಸುತ್ತದೆ.**

a) ಮಿದುಳುವಾತ:– ಹುಟ್ಟುವಾಗ ಇಲ್ಲವೇ ಬಾಲ್ಯಾವಸ್ಥೆಯಲ್ಲಿ ಮಿದುಳಿಗೆ ಆಘಾತವಾಗಿ ಅಂಗಾಂಗಗಳ ಚಲನೆಯಲ್ಲಿ ಹೊಂದಾಣಿಕೆ ಇಲ್ಲದಿರುವುದು.

b) ಆಟಿಸಂ:– ಹೊರ ಜಗತ್ತಿನೊಡನೆ ಸಂಪರ್ಕ ಕಡಿದುಕೊಂಡು ತಮ್ಮ ಪಾಡಿಗೆ ತಾವಿರುವವರು

c) ಬುದ್ಧಿ ಮಾಂದ್ಯತೆ:– ಬುದ್ಧಿ ಶಕ್ತಿ ಬೆಳೆಯದೆ ಇರುವುದು.

d) ಬಹುರೂಪ ನ್ಯೂನತ:– 1995ರ ಕಾಯಿದೆಯಲ್ಲಿ ನಮೂದಿಸಿರುವವುಗಳಲ್ಲಿ ಒಂದಕ್ಕಿಂತ ಹೆಚ್ಚು ವಿಕಲತೆಯುಳ್ಳವರು.

ಟ್ರಸ್ಟ್‌ನ ಮುಖ್ಯ ಕಛೇರಿ ದಿಲ್ಲಿಯಲ್ಲಿದ್ದು, ಕೇಂದ್ರ ಸರಕಾರದ ಅನುಮತಿಯಿಂದ ಇತರ ಊರುಗಳಲ್ಲಿಯೂ ಉಪ ಕಛೇರಿ ಸ್ಥಾಪಿಸಬಹುದು.

### ಟ್ರಸ್ಟ್‌ನ ಗುರಿಗಳು

1. ಸಾಧ್ಯವಾದಷ್ಟೂ ಸ್ವಾವಲಂಬಿಗಳಾಗಿ, ಸ್ವಾತಂತ್ರ್ಯರಾಗಿ ತಮ್ಮ ತಮ್ಮ ಊರು, ಹಳ್ಳಿಗಳಲ್ಲೇ ನೆಲೆಸಲು ಅನುಕೂಲ ಕಲ್ಪಿಸುವುದು.
2. ಈ ಕಾಯಿದೆಯಡಿ ನೋಂದಾಯಿಸಿಕೊಂಡಿರುವ ಸಂಸ್ಥೆಗಳು ಅಂಗವಿಕಲರ ಕುಟುಂಬಗಳಿಗೆ ಬಿಕ್ಕಟ್ಟಿನ ಸಮಯದಲ್ಲಿ ಸಹಾಯ ನೀಡಲು ಅನುವು ಮಾಡಿಕೊಡುವುದು.
3. ಅನಾಥ ಅಂಗವಿಕಲರ ಸಮಸ್ಯೆ ಪರಿಹರಿಸುವುದು.
4. ಅಂಗವಿಕಲರಿಗೆ ಸಮಾನ ಅವಕಾಶ ದೊರಕಿಸಿಕೊಡಲು ಕೆಲಸ ಮಾಡುವುದು

ಈ ಮಂಡಳಿ ಕೇಂದ್ರ ಸರಕಾರದಿಂದ ಒಂದು ನೂರು ಕೋಟಿ ರೂಪಾಯಿಗಳ ಮೂಲ ಬಂಡವಾಳವನ್ನು ಪಡೆದಿದೆ. ಇದರಿಂದ ಬರುವ ಆದಾಯವನ್ನು ಅಂಗವಿಕಲರಿಗೆ ಸೂಕ್ತವಾದ ಜೀವನ ಮಟ್ಟವನ್ನು ಕಲ್ಪಿಸುವ ಯೋಜನೆಗಳಿಗೆ ಬಳಸಬೇಕು.

### ಪೋಷಕರ ನೇಮಕಾತಿ

ಅಂಗವಿಕಲ ವ್ಯಕ್ತಿಯ ಪೋಷಕರು ಅವರಿಗೆ ಪಾಲಕರೊಬ್ಬರನ್ನು ನೇಮಿಸಲು ಸ್ಥಳೀಯ ಸಮಿತಿಗೆ ಅರ್ಜಿ ಹಾಕಬಹುದು. ಅರ್ಜಿಯನ್ನು ಪರಿಶೀಲಿಸಿ ಪೋಷಕರ ಕರ್ತವ್ಯಗಳನ್ನು ನಿಗದಿಪಡಿಸಿ, ಅವರಿಗೆ ಅಂಗವಿಕಲ ವ್ಯಕ್ತಿಯ ಪಾಲನೆ ಹಾಗೂ ಆತನ ಆಸ್ತಿ ಪಾಸ್ತಿಗಳ ನಿರ್ವಹಣೆಯ ಜವಾಬ್ದಾರಿ ವಹಿಸುತ್ತದೆ. ನೇಮಿಸಲ್ಪಟ್ಟ ಆ ವ್ಯಕ್ತಿ ನಿಯತವಾಗಿ ಸಮಿತಿಗೆ ಲೆಕ್ಕ, ವರದಿಗಳನ್ನು ಒಪ್ಪಿಸಬೇಕು ಅಂಗವಿಕಲರ ಆಸ್ತಿಯನ್ನು ಪಾಲಕರು ದುರುಪಯೋಗ ಮಾಡುತ್ತಿದ್ದರೆ ಸಮಿತಿಯು ಅವರನ್ನು ತೆಗೆದು ಹಾಕಬಹುದು.

## C. ಭಾರತೀಯ ಪುನರ್ವಸತಿ ಮಂಡಳಿ (1992)

1992ರಲ್ಲಿ ಅಸ್ತಿತ್ವಕ್ಕೆ ಬಂದ ಈ ಮಂಡಳಿ ಅಂಗವಿಕಲರ ಅಭಿವೃದ್ಧಿಗಾಗಿ ಪರೋಕ್ಷವಾಗಿ ಕಾರ್ಯ ನಿರ್ವಹಿಸುತ್ತಿದೆ. ಅಂಗವಿಕಲರ ಸಬಲೀಕರಣಕ್ಕಾಗಿ, ಮುಖ್ಯವಾಗಿ ಅವರ ಅಗತ್ಯಕ್ಕೆ ಅನುಗುಣವಾದ ಶಿಕ್ಷಣ ನೀಡಲು ಬೇಕಾಗಿರುವ ಮುಲಭೂತ ತಯಾರಿಯನ್ನು ಆದ್ಯತೆಯಾಗಿಟ್ಟುಕೊಂಡು, ಅಂಗವಿಕಲರಿಗೆ ಪನರ್ವಸತಿ ಕಲ್ಪಿಸಲು ಅಗತ್ಯವಾಗಿ ಬೇಕಾಗಿರುವ ತಜ್ಞರ ತರಬೇತಿ ಕಾರ್ಯವನ್ನು ಈ ಮಂಡಳಿ ಪ್ರಮುಖವಾಗಿ ಕೈಗೊಂಡಿದೆ. ಜೊತೆಗೆ ಗ್ರಾಮಾಂತರ ಪ್ರದೇಶಗಳಲ್ಲಿ ಅಂಗವಿಕಲರಿಗೆ ಅವಕಾಶ ಕಲ್ಪಿಸಲು ಹಲವಾರು ಕಾರ್ಯಾಗಾರಗಳನ್ನು ಪ್ರತಿವರ್ಷ ನಡೆಸುತ್ತಿದೆ. ಅಂಗವಿಕತೆಯುಳ್ಳವರನ್ನು ಸಮಾಜದ ಮುಖ್ಯವಾಹಿನಿಗೆ ತರುವಂತೆ ಮಾಡಲು ಹಲವಾರು ರಾಷ್ಟ್ರೀಯ ಯೋಜನೆಗಳನ್ನು ಮಂಡಳಿಯು ಹಮ್ಮಿಕೊಂಡು ಈ ನಿಟ್ಟಿನಲ್ಲಿ ಸಫಲತೆಯೆಡೆಗೆ ಹೆಜ್ಜೆ ಇಟ್ಟಿದೆ.

### ಭಾರತೀಯ ಪುನರ್ವಸತಿ ಮಂಡಳಿಯ ಉದ್ದೇಶಗಳು:

1. ಅಂಗವಿಕಲರ ತರಬೇತಿಯ ಪುನರ್ವಸತಿ ಕ್ಷೇತ್ರದಲ್ಲಿ ತತ್ತ್ವಗಳು ಮತ್ತು ಕಾರ್ಯಕ್ರಮಗಳನ್ನು ಸಂಯೋಜಿಸುವುದು.
2. ತರಬೇತಿ ಸಂಸ್ಥೆಗಳಲ್ಲಿ ಒಂದೇ ರೀತಿಯ ತರಬೇತಿಯನ್ನು ನೀಡುವಂತೆ ದೇಶದಾದ್ಯಂತ ಸಂಯೋಜಿಸುವುದು ಮತ್ತು ಕನಿಷ್ಟ ಅರ್ಹತೆಯನ್ನು ನಿಗದಿಪಡಿಸುವುದು.
3. ವಿಶ್ವ ವಿದ್ಯಾನಿಲಯಗಳು ಮತ್ತು ಸಂಸ್ಥೆಗಳು ನೀಡುವ ಪದವಿ/ಡಿಪ್ಲೊಮಗಳನ್ನು ಗುರುತಿಸಿ ಮಾನ್ಯತೆ ನೀಡುವುದು ಮತ್ತು ಎಲ್ಲಿ ಸೌಲಭ್ಯ ಅತೃಪ್ತಿಕರವಾಗಿದೆಯೋ ಅಲ್ಲಿನ ತರಬೇತಿ ಕಾರ್ಯಕ್ರಮವನ್ನು ರದ್ದುಪಡಿಸುವುದು.

4. ವಿದೇಶಗಳಲ್ಲಿ ಗಳಿಸಿದ ಪದವಿ/ಡಿಪ್ಲೊಮಗಳನ್ನು ಇಲ್ಲಿಯ ಪದವಿಗಳೊಂದಿಗೆ ಹೋಲಿಸಿ ನೋಡಿ ಅದನ್ನು ಅಂಗೀಕರಿಸುವುದು.
5. ಪುನರ್ವಸತಿ ಸೌಲಭ್ಯ ನೀಡುವ ವ್ಯಕ್ತಿಗಳನ್ನು ಗುರುತಿಸಿ ಅವರ ವಿಳಾಸ ಮತ್ತು ಸೇವಾ ಸೌಲಭ್ಯಗಳ ಮಾಹಿತಿಯನ್ನು ಸಂಗ್ರಹಿಸುವುದು.
6. ದೇಶದಾದ್ಯಂತ ನಡೆಸುತ್ತಿರುವ ಅಂಗವಿಕಲರ ಪುನರ್ವಸತಿ ಕಾರ್ಯಕ್ರಮಗಳನ್ನು ಪ್ರೋತ್ಸಾಹಿಸಿ ಅದನ್ನು ಮುಂದುವರಿಸಿಕೊಂಡು ಹೋಗುವಂತೆ ನೋಡಿಕೊಳ್ಳುವುದು.

### ಸಾರ್ವಜನಿಕರ, ಸಂಘ ಸಂಸ್ಥೆಗಳ ಹೊಣೆ

ಅಂಗವಿಕಲರಿಗೆ ಕಾನೂನಿನ ಮೂಲಕ ಸಲ್ಲಬೇಕಾದ ಸೌಲಭ್ಯ ಮತ್ತು ಸೌಕರ್ಯಗಳನ್ನು ಅವರಿಗೆ ತಲುಪಿಸಬೇಕಾದದ್ದು ಬರೇ ಸರಕಾರದ ಹಾಗೂ ಅಧಿಕಾರಿಗಳ ಹೊಣೆ ಅಲ್ಲ. ಈ ಸಮಾಜದ ಸದಸ್ಯರಾಗಿರುವ ನಮ್ಮೆಲ್ಲರ ಜವಾಬ್ದಾರಿಯೂ ಹೌದು. ಅದಕ್ಕಾಗಿ ನಾವು ಈ ಕೆಳಗಿನ ಪ್ರಯತ್ನಗಳನ್ನು ಮಾಡಬಹುದು.

1. ಪ್ರತಿಯೊಬ್ಬ ಗರ್ಭಿಣಿ ಹೆಂಗಸಿನ ಜವಾಬ್ದಾರಿಯೂ ಸಮಾಜದ ಹೊಣೆ. ಆಕೆಗೆ ಸಮತೂಕ ಆಹಾರದ ಸಿಗುವಂತೆ ನೋಡಿಕೊಳ್ಳಬೇಕು.
2. ಮಗುವಿನ ಜನನ ಒಳ್ಳೆಯ ಸುರಕ್ಷಿತ ವಾತಾವರಣದಲ್ಲಿ ತರಬೇತಿ ಹೊಂದಿದ ದಾದಿಯಿಂದ ಆಗಬೇಕು.
3. ರೋಗಗಳನ್ನು ತಡೆಗಟ್ಟುವ ಲಸಿಕೆಗಳನ್ನು ಮಕ್ಕಳಿಗೆ ನಿರ್ದಿಷ್ಟ ವಯಸ್ಸಿನಲ್ಲಿ ತಪ್ಪದೆ ಹಾಕಿಸಬೇಕು.
4. ಯಾವುದೇ ನ್ಯೂನತೆಯಿಂದ ಬಳಲುತ್ತಿದ್ದರೂ ಮಗುವನ್ನು ಶಾಲೆಗೆ ಕಳುಹಿಸಬೇಕು.
5. ಮಕ್ಕಳು ತಮ್ಮ ವೈಯಕ್ತಿಕ ಕೆಲಸಗಳನ್ನು ಆದಷ್ಟೂ ತಾವೇ ಮಾಡಿಕೊಳ್ಳುವಂತೆ ಪ್ರೋತ್ಸಾಹಿಸಬೇಕು.
6. ಮಗುವಿನಲ್ಲಿ ಆತ್ಮ ವಿಶ್ವಾಸವನ್ನು ಬೆಳೆಸಬೇಕು.
7. ಎಲ್ಲಾ ಅಂಗವಿಕಲ ಮಕ್ಕಳೂ ಶಾಲಾ ತರಬೇತಿಯ ಜೊತೆಗೆ ಮನರಂಜನೆ ಹಾಗೂ ವೃತ್ತಿ ತರಬೇತಿಯನ್ನೂ ತೆಗೆದುಕೊಳ್ಳಬೇಕು.
8. ಅಂಗವಿಕಲರೊಂದಿಗೆ ಸೌಜನ್ಯದಿಂದ ವರ್ತಿಸಬೇಕು.
9. ಆಟ, ಮನೋರಂಜನೆ, ಸಾಮಾಜಿಕ ಚಟುವಟಿಕೆಗಳಲ್ಲಿ ಅಂಗವಿಕಲರನ್ನೂ ಸೇರಿಸಿಕೊಳ್ಳಿ.
10. ಅಂಗವಿಕಲರ ಹಕ್ಕು ಮತ್ತು ಅಗತ್ಯಗಳ ಬಗ್ಗೆ ಸಮುದಾಯದಲ್ಲಿ ಅರಿವು ಮೂಡಿಸಿ, ಅವರಿಗೆ ಕಲಿಯಲು ಮತ್ತು ವೃತ್ತಿ ಕೈಗೊಳ್ಳಲು ಅವಕಾಶ ಕೊಡಿ.
11. ನಿಮಗೆ ಸಾಧ್ಯವಾದ ಕಡೆ ಅಂಗವಿಕಲರಿಗೆ ಸರಿಹೊಂದುವ ಕೆಲಸವಿದ್ದರೆ ಅವರಿಗೇ ಅದನ್ನು ಕೊಡಿಸಿ.
12. ಸಂಸ್ಥೆಗಳಲ್ಲಿ ನಿರ್ಧಾರ ತೆಗೆದುಕೊಳ್ಳುವ ಮಟ್ಟದಲ್ಲಿ ಅಂಗವಿಕಲರು ಪಾಲ್ಗೊಳ್ಳುವಂತೆ ಮಾಡಿ.
13. ಕಾನೂನಿನ ಪ್ರಕಾರ ಅಂಗವಿಕಲರಿಗೆ ಸಲ್ಲಿಸಬೇಕಾಗಿರುವ ಸೌಲಭ್ಯಗಳನ್ನು ಅವರಿಗೆ ಕೊಡಿಸಲು ಪ್ರಯತ್ನಿಸಿ.

## ವಿಶೇಷ ಅಗತ್ಯವಿರುವ ವ್ಯಕ್ತಿಗಳಿಗಾಗಿ ಸರಕಾರದ ನಿಯಮ, ಶಾಸನ, ಕಾನೂನುಗಳು

### ಅ. ಸರಕಾರಿ ಶಾಸನಗಳು

1. ರಾಷ್ಟ್ರೀಯ ಆರೋಗ್ಯ ಯೋಜನೆ (1982) National Health Policy.
2. ರಾಷ್ಟ್ರೀಯ ಶಿಕ್ಷಣ ಯೋಜನೆ (1986) National Policy on Education.
3. ರಾಷ್ಟ್ರೀಯ ಅಂಗವಿಕಲರ ಪುನರ್ವಸತಿ ಯೋಜನೆ.

### ಆ. ಸರಕಾರಿ ಕಾರ್ಯಕ್ರಮಗಳು

1. ರಾಷ್ಟ್ರೀಯ ಅಂಧತ್ವ ನಿಯಂತ್ರಣಾ ಕಾರ್ಯಕ್ರಮ (1976) National Program on control of Blindness .
2. ರಾಷ್ಟ್ರೀಯ ಮಾನಸಿಕ ಆರೋಗ್ಯ ಕಾರ್ಯಕ್ರಮ (1981) National Mental Health Program.
3. ರಾಷ್ಟ್ರೀಯ ಪೌಷ್ಟಿಕ ಆಹಾರ ಕಾರ್ಯಕ್ರಮ (1981) National Nutrition Program.
4. ಪಲ್ಸ್ ಪೋಲಿಯೋ ಕಾರ್ಯಕ್ರಮ Pulse Polio Program (1995)
5. ರಾಷ್ಟ್ರೀಯ ರೋಗನಿರೋಧಕ ಕಾರ್ಯಕ್ರಮ National Immunization program.
6. National Leprocy Control program (1955)
   ರಾಷ್ಟ್ರೀಯ ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮ
   Rename: National Leprocy Eradication program (1983)
   'ಪುನರ್ನಾಮಕರಣ: ರಾಷ್ಟೀಯ ಕುಷ್ಠರೋಗ ನಿರ್ಮೂಲನ ಕಾರ್ಯಕ್ರಮ(1983)

### ವಿಶೇಷ ಅಗತ್ಯವಿರುವವರಿಗೆ ಸರಕಾರದ ಯೋಜನೆಗಳು

### ಅ) ವ್ಯಕ್ತಿಗತವಾಗಿ

1. ಅಂಗವಿಕಲರಿಗೆ ವಿದ್ಯಾರ್ಥಿ ವೇತನ
2. ಕೇಂದ್ರ ಸರ್ಕಾರದಲ್ಲಿ ಸಿ ಮತ್ತು ಡಿ ಗುಂಪಿನ ಹುದ್ದೆಯಲ್ಲಿ ದೈಹಿಕ ನ್ಯೂನತೆಯುಳ್ಳವರಿಗೆ ಮೀಸಲಾತಿ.
3. ವಯಸ್ಕ ಅಂಗವಿಕಲರಿಗೆ ನಿರುದ್ಯೋಗ ಭತ್ಯೆ ಮತ್ತು ಸ್ವ-ಉದ್ಯೋಗ ಕೈಗೊಳ್ಳಲು ಸಹಾಯ
4. ಬುದ್ಧಿಮಾಂದ್ಯರ ಕುಟುಂಬಕ್ಕೆ ವೇತನ (ಪಿಂಚಣಿ)
5. ವಿಮಾ ಯೋಜನೆಗಳು
   a) ಜೀವನ ಆಧಾರ LIC
   b) ಜೀವನ ವಿಶ್ವಾಸ LIC
   c) ಅಂಗವಿಕಲರಿಗೆ ವಿಶೇಷ ವಿಮೆ UTIನ ಮಕ್ಕಳ ಬೆಳವಣಿಗೆ ಕೊಡುಗೆ ನಿಧಿ (Childrens Gift growth Fund) (1986)
6. ಅಂಗವಿಕಲರಿಗೆ ಅಗತ್ಯ ಸಲಕರಣೆಗಳು/ಉಪಕರಣಗಳನ್ನು ಕೊಳ್ಳಲು ಧನಸಹಾಯ
7. ಅಂಗವಿಕಲರಿಗೆ ಉದ್ಯೋಗಾವಕಾಶ ಕಲ್ಪಿಸಲು ವಿಶೇಷ ಉದ್ಯೋಗ ವಿನಿಮಯ ಕೇಂದ್ರ

### ಆ) ಸಂಸ್ಥೆಗಳಿಗೆ

1) ಸಮನ್ವಯ ಶಿಶುವಿಕಾಸ ಯೋಜನೆ (ICDS)
2) ಗ್ರಾಮೀಣ ಅಭಿವೃದ್ಧಿ ಇಲಾಖೆಯಲ್ಲಿ ಯೋಜನೆಗಳು
3) ಅಂಗವಿಕಲರಿಗೆ ಸಮನ್ವಯ ಶಿಕ್ಷಣ ಯೋಜನೆ (ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯಲ್ಲಿ)
4) ರಾಷ್ಟ್ರೀಯ ಅಂಗವಿಕಲ ಆರ್ಥಿಕ ಕಾರ್ಪೊರೇಷನ್ (ನಿಗಮ) ಅಡಿಯಲ್ಲಿ ಧನಸಹಾಯ
5) ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆಯ ಆಂದೋಲನ ರೂಪದ ಯೋಜನೆ (project)

## ಇ) ಗ್ರಾಮೀಣ ಅಭಿವೃದ್ಧಿ ಇಲಾಖೆಯಡಿಯಲ್ಲಿ

ಗ್ರಾಮೀಣ ಪ್ರದೇಶದಲ್ಲಿರುವ ಅಂಗವಿಕಲರ ಆರ್ಥಕ ಸ್ಥಿತಿ ಸುಧಾರಿಸಲು ಸರಕಾರದ ವಿವಿಧ ಯೋಜನೆಗಳಲ್ಲಿ ಶೇಕಡಾ 3 ರಷ್ಟು ರಿಯಾಯಿತಿಯನ್ನು ನೀಡಲಾಗಿದೆ.

a) ಗ್ರಾಮೀಣ ಅಭಿವೃದ್ಧಿಗಳ ಏಕತೆಯ ಯೋಜನೆ (IRDP)
b) ಗ್ರಾಮೀಣ ಯುವಕರ ಸ್ವ ಉದ್ಯೋಗ ತರಬೇತಿ (TRYSEM)
c) ಗ್ರಾಮೀಣ ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ (DWCRA)
d) ಇಂದಿರಾ ಆವಾಜ್ ಯೋಜನೆ ಮತ್ತು ಜವಾಹರ್ ರೋಜಗಾರ್ ಯೋಜನೆ (JRY)
e) ಸ್ವರ್ಣ ಜಯಂತಿ ಗ್ರಾಮೀಣ ಸ್ವರೋಜಗಾರ್ ಯೋಜನೆ (SGSY)

## ಈ) ಅಂಗವಿಕಲರ ಅಭಿವೃದ್ಧಿಗಾಗಿ ಕೇಂದ್ರ ಸರಕಾರ ಸ್ಥಾಪಿತ ಸಂಸ್ಥೆಗಳು

1. ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು.
2. ದೃಷ್ಟಿಮಾಂದ್ಯರ ರಾಷ್ಟ್ರೀಯ ಸಂಸ್ಥೆ ಡೆಹ್ರಾಡೂನ್.
3. ಅಲಿಯವರ್ ಜಂಗ್‌ರವರ ಶ್ರವಣಮಾಂದ್ಯರ ರಾಷ್ಟ್ರೀಯ ಸಂಸ್ಥೆ. ಬಾಂದ್ರಾ ರಿಕ್ಲಮೇಷನ್.
4. ಬುದ್ಧಿಮಾಂದ್ಯರ ರಾಷ್ಟ್ರೀಯ ಸಂಸ್ಥೆ ಮನೋವಿಕಾಸ್ ನಗರ.
5. ಪುನರ್ವಸತಿ ರಾಷ್ಟ್ರೀಯ ಸಂಶೋಧನಾ ಮತ್ತು ತರಬೇತಿ ಸಂಸ್ಥೆ, ಕಟಕ್.
6. ಮೂಳೆ ಅಂಗವಿಕಲರ ರಾಷ್ಟ್ರೀಯ ಸಂಸ್ಥೆ, ಕೊಲ್ಕತ್ತ.
7. ದೈಹಿಕ ಅಂಗವಿಕಲರ ಸಂಸ್ಥೆ, ದೆಹಲಿ.
8. ಬಹುರೂಪ ಅಂಗವಿಕಲರ ರಾಷ್ಟ್ರೀಯ ಸಂಸ್ಥೆ, ಚೆನ್ನೈ.
9. ಬೆನ್ನುಹುರಿ ಆಘಾತದ ಕೇಂದ್ರ, ವಸಂತ ವಿಹಾರ, ಹೊಸದೆಹಲಿ.
10. ಕೃತಕ ಅಂಗತಯಾರಿಕಾ ನಿಗಮ, ಕಾನ್ಪುರ.

## ಉ) ವ್ಯಕ್ತಿಗತ ಸೌಲಭ್ಯಗಳು ಮತ್ತು ರಿಯಾಯಿತಿಗಳು (ಕೇಂದ್ರ ಸರ್ಕಾರ)

1. ವಿವಿಧ ಮಟ್ಟದ ತೀವ್ರತೆಗೆ ಅನುಸಾರವಾಗಿ ರಸ್ತೆ, ರೈಲು ಮತ್ತು ವಿಮಾನದ ಪ್ರಯಾಣ ದರದಲ್ಲಿ ರಿಯಾಯಿತಿ.
2. ಅಂಗವಿಕಲರಿಗೆ ಪ್ರಶಸ್ತಿ ಮತ್ತು ಗೌರವ.
3. ಅಂಗವಿಕಲರು ಉಪಯೋಗಿಸುವ ಸಾಧನ ಸಲಕರಣೆಗಳಿಗೆ (ವೈಯಕ್ತಿಕ ಹಾಗೂ ಸಂಸ್ಥೆಗಳಿಗೆ) ತೆರಿಗೆ ರಿಯಾಯಿತಿ.
4. ಆದಾಯ ತೆರಿಗೆ ರಿಯಾಯಿತಿ: ಅಂಗವಿಕಲ ಮಕ್ಕಳ ಪೋಷಕರಿಗೆ ಅವರ ಆದಾಯದಲ್ಲಿ ತೆರಿಗೆ ವಿನಾಯಿತಿ.
5. ಸ್ವಂತ ಉದ್ಯೋಗ ಕೈಗೊಳ್ಳಲು ರಿಯಾಯಿತಿ ಬಡ್ಡಿಯ ಸಾಲ.
6. ಕುಟುಂಬ ಅಂಗವಿಕಲ ವೇತನ.
7. STD/PCO ವಿತರಣೆಯಲ್ಲಿ ಆದ್ಯತೆ.
8. ಬುದ್ಧಿಮಾಂದ್ಯ ಮಕ್ಕಳಿರುವ ನೌಕರರಿಗೆ ಅವರಿಗೆ ಬೇಕಿರುವ ನಗರಕ್ಕೆ ವರ್ಗಾವಣೆ.
9. ಅಂಗವಿಕಲ ಮಕ್ಕಳಿರುವ ಸರ್ಕಾರಿ ನೌಕರರ ಮಕ್ಕಳಿಗೆ ವಿದ್ಯಾರ್ಥಿ ವೇತನ.

10. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನೌಕರಿಯಲ್ಲಿ ದೈಹಿಕ, ಶ್ರವಣ ಮತ್ತು ದೃಷ್ಟಿಮಾಂದ್ಯರಿಗೆ ಶೇ.1 ಮೀಸಲಾತಿ, ಜೊತೆಗೆ ವಿಶೇಷ ಉದ್ಯೋಗ ವಿನಿಮಯ ಕಛೇರಿಯಿಂದ ಸಹಾಯ. ಅಲ್ಲದೆ ಅತಿ ಹೆಚ್ಚಿನ ವಯೋಮಾನ ಮಿತಿಯ ಸಡಿಲಿಕೆ, ಬೆರಳಚ್ಚುಗಾರ ಅರ್ಹತೆಯಲ್ಲಿ ಸಡಿಲಿಕೆ.
11. ದೈಹಿಕ ನ್ಯೂನತೆಯಿರುವವರಿಗೆ UPSC/SSC ಪರೀಕ್ಷೆಗೆ ನಿಗದಿಪಡಿಸಿದ ಶುಲ್ಕದಲ್ಲಿ ರಿಯಾಯಿತಿ.
12. LDC ಹುದ್ದೆಗೆ ಆರಿಸುವಲ್ಲಿ ಬೆರಳಚ್ಚು ಪರೀಕ್ಷೆಯಿಂದ ರಿಯಾಯಿತಿ.
13. ನಿಬಂಧನೆಗೆ ಅನುಸಾರ ಅಂಚೆ ಕಛೇರಿಯಲ್ಲಿ ಅವರ ಬದಲಾವಣೆಯಲ್ಲಿ ವಿನಾಯಿತಿ.
14. ದೃಷ್ಟಿ ದೋಷವಿರುವವರಿಗೆ ದೂರವಾಣಿ ಸೌಲಭ್ಯದ ದರದಲ್ಲಿ ರಿಯಾಯಿತಿ.
15. ದೈಹಿಕ ನ್ಯೂನತೆ ಹಾಗೂ ದೃಷ್ಟಿದೋಷವಿರುವ ನೌಕರರಿಗೆ ವಿಶೇಷ ಪ್ರಯಾಣ ಭತ್ಯೆ.
16. ಪೆಟ್ರೋಲ್ ಮತ್ತು ಅನಿಲ ಸಚಿವಾಲಯದಡಿಯಲ್ಲಿ ತೈಲ ಕಂಪನಿಗಳ ಮಾರಾಟ ಮತ್ತು ಏಜನ್ಸಿಗಳ ವಿತರಣೆಯಲ್ಲಿ ಮೀಸಲಾತಿ ಆದ್ಯತೆ.

## ಕೆಲವು ಉಪಯುಕ್ತ ವಿಳಾಸಗಳು

1. **ಅಂಗವಿಕಲ ಆಯುಕ್ತರವರ/ಕಮೀಷನರ್‌ರವರ ಕಛೇರಿ (ಕರ್ನಾಟಕ)**
   #4, ತಂಬೂಚೆಟ್ಟಿ ಬೀದಿ, ಕಾಕ್ಸಟೌನ್, ಬೆಂಗಳೂರು–5

2. **ಮಹಿಳೆ ಮತ್ತು ಕಲ್ಯಾಣ ನಿರ್ದೇಶಕರು, ಮೈಸೂರು.**

3. **ಭಾರತೀಯ ಪುನರ್ವಸತಿ ಕೌನ್ಸಿಲ್ RCI House, B-22, ಕುತುಬ್ ಇನ್ಸ್ಟಟ್ಯೂಶನಲ್ ಏರಿಯಾ, ಹೊಸದೆಹಲಿ**–110 016.

4. **ನಿರ್ದೇಶಕರು,**
   ಅಂಗವಿಕಲ ಕಲ್ಯಾಣ ಇಲಾಖೆ,
   ಪೋಡಿಯಂ ಬ್ಲಾಕ್ ವಿಶ್ವೇಶ್ವರಯ್ಯ ಗೋಪುರ,
   ಅಂಬೇಡ್ಕರ್ ರಸ್ತೆ, ಬೆಂಗಳೂರು – 1

5. **ಅಂಗವಿಕಲರ ಹಣಕಾಸು ಅಭಿವೃದ್ಧಿ ನಿಗಮ,**
   ಕೇರ್ ಆಫ್ ಕರ್ನಾಟಕ ರಾಜ್ಯ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ,
   ಮೊದಲನೇ ಮುಖ್ಯ ರಸ್ತೆ, ಶೇಷಾದ್ರಿಪುರ, ಬೆಂಗಳೂರು–20

6. **ಜಿಲ್ಲಾ ಪುನರ್ವಸತಿ ಕೇಂದ್ರ**, ತಿಲಕ್ ನಗರ, ಮೈಸೂರು.

7. **ಗೌರವ ಕಾರ್ಯದರ್ಶಿ**
   ಬುದ್ಧಿಮಾಂದ್ಯರ ಒಕ್ಕೂಟ (ಸಂಘ),
   ಕಿದ್ವಾಯಿ ಕ್ಯಾನ್ಸರ್ ಆಸ್ಪತ್ರೆ ಮತ್ತು ಹೊಸೂರು ಎದುರು ರಸ್ತೆಯ ನಡುವೆ,
   ಬೆಂಗಳೂರು–560 029

## ಅಂಗವಿಕಲ ಮಕ್ಕಳಿಗಿರುವ ಶೈಕ್ಷಣಿಕ ಸೌಲಭ್ಯಗಳು:-

ಸ್ವಾತಂತ್ರ್ಯಾ ನಂತರ ದೇಶದ ಅಭಿವೃದ್ಧಿಗೆ ಪೂರಕವಾಗಿ ವಿಶೇಷ ಶಿಕ್ಷಣಕ್ಕೆ ಆದ್ಯತೆ ನೀಡಲಾಯಿತು. ಇದರ ಪರಿಣಾಮವಾಗಿ ಇಂದು ದೇಶದಲ್ಲಿ ಹೆಚ್ಚು ವಿಶೇಷ ಶಾಲೆಗಳು ಸ್ಥಾಪಿತವಾಗಿವೆ. ಇವುಗಳಲ್ಲಿ ಹೆಚ್ಚಿನ ಶಾಲೆಗಳು ಕೇಂದ್ರ ಇಲ್ಲವೇ ರಾಜ್ಯ ಸರಕಾರದಿಂದ ಅನುದಾನ ಪಡೆದಿವೆ.

ಈ ಶಾಲೆಗಳು ನಿರ್ದಿಷ್ಟ ಅಂಗವಿಕಲತೆಗೆ ಸೀಮಿತವಾಗಿವೆ. ಹಾಗೂ ಹೆಚ್ಚೂ ಕಡಿಮೆ ಪಟ್ಟಣ ಪ್ರದೇಶಗಳಲ್ಲಿ ಸ್ಥಾಪಿತವಾಗಿವೆ. ಒಂದು ಊರಿನಲ್ಲಿ ಕಿವುಡು ಮಕ್ಕಳ ಶಾಲೆ ಇದ್ದರೆ ಆ ಊರಿನ ಸುತ್ತ ಮುತ್ತಲಿನ ಊರಿನವರಿಗೆಲ್ಲ ಅಲ್ಲಿ ಪ್ರವೇಶ ಸಿಗುತ್ತದೆ. ಆದರೆ ಬೇರೆ ರೀತಿಯ ಅಂಗವಿಕಲತೆಯುಳ್ಳ ಮಕ್ಕಳಿಗೆ ಅಲ್ಲಿ ಪ್ರವೇಶಾವಕಾಶ ಇರುವುದಿಲ್ಲ. ಕಿವುಡು ಮಕ್ಕಳಿಗೆ ಬೇರೇನಾದರೂ ನ್ಯೂನತೆ ಇದ್ದರೆ ಅವರಿಗೂ ಕೂಡ ಇಂತಹ ಶಾಲೆಗಳು ಪ್ರವೇಶವನ್ನು ನಿರಾಕರಿಸುತ್ತವೆ. ಎಲ್ಲಾ ಊರಿನಲ್ಲೂ ಎಲ್ಲಾ ರೀತಿಯ ವಿಶೇಷ ಶಾಲೆಗಳನ್ನು ಸ್ಥಾಪಿಸುವುದು ಸಾಧ್ಯವೇ? ಅದರ ಅಗತ್ಯವಿದೆಯೆ? ಇದಕ್ಕೆ ಒಂದೇ ಪರಿಹಾರ ಎಂದರೆ ಶಾಲಾ ವಯಸ್ಸಿನ ಅಂಗವಿಕಲ ಮಕ್ಕಳು ಅವರ ಮನೆಯ ಸಮೀಪದ ಯಾವುದೇ ಶಾಲೆಯಲ್ಲಿ ದಾಖಲಿಸುವುದು. ಶಾಲೆಗಳು ಎಂತಹಾ ನ್ಯೂನತೆಯುಳ್ಳ ಮಗುವಿಗೆ ಪ್ರವೇಶ ನಿರಾಕರಿಸುವಂತಿಲ್ಲ. ಜೊತೆಗೆ ಶಾಲೆಯಲ್ಲಿ ಅಂಗವಿಕಲ ಮಕ್ಕಳ ಅಗತ್ಯಕ್ಕೆ ಅನುಸಾರವಾಗಿ ಕೆಲವು ಮಾರ್ಪಾಡುಗಳನ್ನು ಮಾಡುವ ಸ್ವಾತಂತ್ರ್ಯ ಶಾಲಾ ಮುಖ್ಯೋಪಾಧ್ಯಾಯರಿಗೆ ಇದೆ. ಇದರ ಲಾಭ ಪಡೆದು ಆಯಾ ಶಾಲೆಯ ಮುಖ್ಯಸ್ಥರು ಅಲ್ಲಿ ದಾಖಲಾಗಿರುವ ವಿವಿಧ ರೀತಿಯ ಅಂಗವಿಕಲ ಮಕ್ಕಳಿಗೆ ಬೇಕಿರುವ ಸೌಕರ್ಯಗಳನ್ನು ಸರಕಾರದ ನೆರವಿನಿಂದ ಪಡೆದುಕೊಳ್ಳಬಹುದು. ಈ ನೆರವು ಮಕ್ಕಳಿಗೆ ಬೇಕಿರುವ ಸಾಧನ ಸಲಕರಣೆಗಳನ್ನು ಪಡೆದುಕೊಳ್ಳುವುದಿರಬಹುದು. ಪಠ್ಯ ವಸ್ತುವಿನ ಮಾರ್ಪಾಡು ಇರಬಹುದು ಅಥವಾ ಸಹಾಯಕ್ಕೆ ವೃತ್ತಿ ಪರ ವ್ಯಕ್ತಿಗಳನ್ನು ಕರೆಸಿಕೊಳ್ಳುವುದಿರಬಹುದು. ಇದಲ್ಲದೆ ಒಬ್ಬ ಶಿಕ್ಷಕನಿಗೆ ವಿಶೇಷ ಶಿಕ್ಷಣದ ತರಬೇತಿ ಕಾರ್ಯಕ್ರಮದಲ್ಲಿ ಭಾಗವಹಿಸುವ ಅವಕಾಶವನ್ನು ನೀಡಬಹುದು.

ಇವೆಲ್ಲವನ್ನೂ ಶಾಲಾ ಆಡಳಿತ ನಡೆಸುವವರು ಮುತುವರ್ಜಿ ವಹಿಸಿ ಮಾಡಿದ್ದೇ ಆದರೆ ಎಲ್ಲಾ ರೀತಿಯ ಅಂಗವಿಕಲತೆಯುಳ್ಳ ಮಕ್ಕಳಿಗೂ ಇತರ ಮಕ್ಕಳೊಂದಿಗೆ ಬೆರೆತು ಕಲಿಯುವ ಅವಕಾಶ ಸಿಕ್ಕಿದಂತಾಗುತ್ತದೆ. ಸಮಾಜದ ಮುಖ್ಯವಾಹಿನಿಯಲ್ಲಿ ಬೆರೆಯಲು ಇದಕ್ಕಿಂತ ಒಳ್ಳೆಯ ಅವಕಾಶ ಹಾಗೂ ಆರಂಭ ಬೇರೆ ಇಲ್ಲ. ಮಗು ದೈಹಿಕವಾಗಿ ಎಲ್ಲರೊಂದಿಗೆ ಬೆರೆತರೆ ಸಾಲದು. ಸಾಮಾಜಿಕವಾಗಿ, ಮಾನಸಿಕವಾಗಿ ಹಾಗೂ ಭಾವನಾತ್ಮಕವಾಗಿ ಸಮನ್ವಯತೆಯನ್ನು ಸಾಧಿಸುವತ್ತ ಶಿಕ್ಷಣವು ಎಲ್ಲರನ್ನೂ ಕೊಂಡೊಯ್ಯಬೇಕು. ಈ ನಿಟ್ಟಿನಲ್ಲಿ ಸಮನ್ವಯ ಶಿಕ್ಷಣವು ಬಹಳ ಮಹತ್ವಪೂರ್ಣ. ಇಪ್ಪತ್ತು ವರ್ಷಗಳ ನಂತರ ಅಂಗವಿಕಲರ ಬಗ್ಗೆ ಸಾಮಾಜಿಕ ಅಭಿಪ್ರಾಯ ಬದಲಾಗಬೇಕಿದ್ದರೆ ಸಮನ್ವಯ ಶಿಕ್ಷಣಕ್ಕೆ ಇಂದು ಆದ್ಯತೆ ನೀಡಬೇಕು. ನಿಜವಾದ ಅರ್ಥದಲ್ಲಿ ಇದು ಜಾರಿಗೆ ಬರಬೇಕು. ದೈಹಿಕವಾಗಿ ಎಲ್ಲಾ ಅಂಗವಿಕಲ ಮಕ್ಕಳು ಶಾಲೆಗಳಲ್ಲಿ ಭಾಗವಹಿಸುವುದಲ್ಲ. ಅವರ ವಿಶೇಷ ಅಗತ್ಯಗಳಿಗೆ ತರಬೇತಿ ನೀಡಿ ಅವರಲ್ಲಿ ಮನೋಸ್ಥೈರ್ಯ ವೃದ್ಧಿಯಾಗುವಂತೆ ಮಾಡಿದ್ದೇ ಆದರೆ ನಮ್ಮ ಗುರಿಯತ್ತ ಸಾಗುವ ಹಾದಿ ಸುಗಮ.

## ಹೆಣ್ಣು ಮಕ್ಕಳು ಮತ್ತು ಅಂಗವಿಕಲತೆ

ಅಂಗವಿಕಲತೆಯೇ ನಮ್ಮ ಸಮಾಜದಲ್ಲಿ ಒಂದು ಶಾಪ. ಒಂದು ವೇಳೆ ಅಂಗವಿಕಲ ಮಗುವು ಹೆಣ್ಣಾಗಿದ್ದರೆ ಆ ಮಗುವಿನ ಪಾಡು ಹೇಳುವುದೇ ಬೇಡ. ತನ್ನ ಮನೆಯವರಿಂದಲೇ ನಿರ್ಲಕ್ಷ್ಯಕ್ಕೆ ಒಳಗಾಗುವುದಿದೆ. ಅಂಗವಿಕಲ ಹೆಣ್ಣು ಮಕ್ಕಳು ಮತ್ತು ಹೆಂಗಸರು ಸಮಾಜದಲ್ಲಿ ತೀರಾ ಮೂಲೆ ಗುಂಪಾದವರು. ಅಂಗವಿಕಲ ಮಗು ಹೆಣ್ಣಾದರೆ

ಅದಕ್ಕೆ ವೈದ್ಯಕೀಯ, ಶೈಕ್ಷಣಿಕ ಹಾಗೂ ವೃತ್ತಿಪರ ಬೆಂಬಲ ಸಿಗುವುದು ಕನಸಿನ ಮಾತು. ಸಾಮಾಜಿಕ ಚಟುವಟಿಕೆಗಳಿಂದೆಲ್ಲಾ ಬಹಿಷ್ಕರಿಸಲ್ಪಟ್ಟು ಮಾನಸಿಕ ಯಾತನೆಯನ್ನು ಅನುಭವಿಸುವ ಇವರ ನೋವು ಮಹಿಳೆಯರ ಹಕ್ಕುಗಳಿಗೆ, ಸಮಾನತೆಗೆ ಹೋರಾಡುವ ಗುಂಪಿನವರಿಗೆ ಇನ್ನೂ ಮುಟ್ಟಿಲ್ಲ. ಆದಷ್ಟು ಬೇಗ ಅಂಗವಿಕಲ ಹೆಣ್ಣು ಮಕ್ಕಳ ನ್ಯೂನತೆಗಳನ್ನು ಗುರುತಿಸಿ ಅವರಿಗೆ ವೈದ್ಯಕೀಯ ನೆರವು ಹಾಗೂ ಶೈಕ್ಷಣಿಕ ತರಬೇತಿ ಸಿಗುವಂತೆ ಆರಿಸಿಕೊಂಡು ತನ್ನ ಕಾಲಿನ ಮೇಲೆ ನಿಲ್ಲುವಂತೆ ಪ್ರೋತ್ಸಾಹಿಸಬೇಕು. ಸಾಮಾಜಿಕ ಭದ್ರತೆಗಾಗಿ ಅವರ ಬದುಕಿಗೆ ಆರ್ಥಿಕ ಸ್ವಾವಲಂಬನೆ ಊರುಗೋಲು ಮದುವೆಯ ವಯಸ್ಸಿನ ಹೆಣ್ಣು ಮಕ್ಕಳಿಗೆ ವರಾನ್ವೇಷಣೆ ಹಾಗೂ ಸಾಮೂಹಿಕ ಸರಳ ವಿವಾಹಗಳನ್ನು ನಡೆಸಬೇಕು. ಅಂಗವಿಕಲ ಹೆಣ್ಣು ಮಕ್ಕಳನ್ನು ಮದುವೆಯಾಗಲು ಮುಂದೆ ಬರುವ ಗಂಡಸರಿಗೆ ಪ್ರೋತ್ಸಾಹ ನೀಡಬೇಕು. ಈ ವಿಷಯಗಳ ಬಗ್ಗೆ ಪ್ರಚಾರ ಮಾಧ್ಯಮಗಳ ಮೂಲಕ ಹೆಚ್ಚಿನ ಜನರಿಗೆ ವಿಷಯ ಮುಟ್ಟಿಸಲು ತಯಾರಿ ನಡೆಸಬೇಕು. ಸರಕಾರವೇ ಎಲ್ಲವನ್ನೂ ಮಾಡಲಿ ಎಂದು ಕಾಯುವುದರ ಬದಲು ಈ ಜವಾಬ್ದಾರಿಯನ್ನು ನಾವೆಲ್ಲರೂ ಹಂಚಿಕೊಂಡರೆ ಗುರಿ ಮುಟ್ಟುವುದು ಸುಲಭ.

## ಮಕ್ಕಳ ಅಂಗವಿಕಲತೆಯಿಂದ ಪೋಷಕರ ಮೇಲೆ ಒತ್ತಡ, ಅದರ ಪರಿಣಾಮ ಮತ್ತು ಪರಿಹಾರ

ಮಕ್ಕಳನ್ನು ಸರಿಯಾದ ರೀತಿಯಲ್ಲಿ ಬೆಳೆಸುವುದು ಬಹಳ ಜವಾಬ್ದಾರಿಯುತ ಕೆಲಸ. ಎಲ್ಲ ಪೋಷಕರೂ ಒಂದಲ್ಲ ಒಂದು ಸಂದರ್ಭದಲ್ಲಿ ಏನೂ ತೋಚದೆ ತಲೆಯ ಮೇಲೆ ಕೈಹೊತ್ತು ಕೂರುತ್ತಾರೆ. ಹಾಗಿರುವಾಗ ಮಗುವಿನಲ್ಲೇನಾದರೂ ನ್ಯೂನತೆಯಿದ್ದರೆ, ಪೋಷಕರಿಗುಂಟಾಗುವ ಅಸಹಾಯಕ ಸ್ಥಿತಿ ನಿಜಕ್ಕೂ ಗಂಭೀರ. ಜೊತೆಗೆ ಈ ಕೆಳಗಿನ ಕಾರಣಗಳೂ ಸೇರಿ ಪೋಷಕರ ಮೇಲೆ, ಅದರಲ್ಲೂ ತಾಯಿಯ ಮೇಲೆ ಒತ್ತಡ ಅಧಿಕವಾಗುತ್ತದೆ.

- ಹಣಕಾಸಿನ ಅಡಚಣೆಯನ್ನು ನಿಭಾಯಿಸುವುದು.
- ಕುಟುಂಬದ ಇತರ ಸದಸ್ಯರನ್ನು ನೋಡಿಕೊಳ್ಳುವ ಹೊಣೆಗಾರಿಕೆ. ಮುಖ್ಯವಾಗಿ ಮತ್ತೊಂದು ಮಗುವಿನ ಪೋಷಣೆ.
- ದಿನವಿಡೀ ಮಗುವಿನ ತರಬೇತಿಗಾಗಿ ಓಡಾಡಿ ದಣಿಯುವುದು.
- ಮನರಂಜನೆಯ ಅಭಾವ.
- ತರಬೇತಿ ತೆಗೆದುಕೊಳ್ಳುವುದರ ಬಗ್ಗೆ ಕುಟುಂಬದ ಸದಸ್ಯರ ನಿರ್ಲಕ್ಷ್ಯ.

ಈ ಮೇಲಿನ ಕಾರಣಗಳ ಜೊತೆಗೆ ಪ್ರತಿಯೊಬ್ಬ ತಾಯಿಗೂ ಅವಳದೇ ಆದಂತಹ ವೈಯಕ್ತಿಕ ದೈಹಿಕ ಹಾಗೂ ಮಾನಸಿಕ ಒತ್ತಡಗಳಿರುವುದು ಸಹಜ. ಇವೆಲ್ಲದರ ಪರಿಣಾಮವಾಗಿ ಆಕೆ ದಿನದಿಂದ ದಿನಕ್ಕೆ ಜರ್ಝರಿತಳಾಗುತ್ತಾಳೆ.

- ಚಿಕ್ಕಪುಟ್ಟ ವಿಷಯಕ್ಕೂ ಸಿಡುಕುವುದು.
- ಕ್ಷುಲ್ಲಕ ಕಾರಣಗಳಿಗೆ ಅಳುವುದು.
- ಜೀವನದಲ್ಲಿ ಆಸಕ್ತಿ ಕಳೆದುಕೊಳ್ಳುವುದು.
- ಸಮಾರಂಭಗಳಿಗೆ ಹೋಗಲು ನಿರಾಕರಿಸುವುದು.
- ಮಗುವಿನ ಮೇಲೆ ವಿನಾಕಾರಣ ದ್ವೇಷ.
- ಇತರರೊಡನೆ ಬೆರೆಯಲು ಹಿಂದೇಟು ಹಾಕುವುದು.

ಹೀಗೆ ಹತ್ತು ಹಲವು ರೀತಿಯಲ್ಲಿ ಹೊರನೋಟಕ್ಕೆ ತೋರ್ಪಡಿಸಿಕೊಳ್ಳುತ್ತದೆ.
ಪೋಷಕರ ಮೇಲೆ ನಿರ್ಮಾಣಗೊಳ್ಳುವ ಈ ಆಂತರಿಕ ಒತ್ತಡಗಳಿಗೆ ಸಮಸ್ಯೆ ಉಲ್ಬಣಿಸುವ ಮುನ್ನವೇ ಪರಿಹಾರ ಕಂಡುಕೊಳ್ಳುವುದು ಒಳಿತು.

**ಕುಟುಂಬದವರ ಸಹಕಾರ:**

- ಕುಟುಂಬದ ಇತರ ಸದಸ್ಯರ ಒತ್ತಾಸೆ.
- ಹಣಕಾಸಿನ ಸಹಾಯ.
- ಮಗುವನ್ನು ಆಗಾಗ್ಗೆ ಬಂದು ವಿಚಾರಿಸಿಕೊಳ್ಳುವುದು.
- ಮಗುವಿನ ತರಬೇತಿಯ ಬಗ್ಗೆ ಕಾಳಜಿ ತೋರುವುದು.
- ಮಗುವಿನ ಅಭಿವೃದ್ಧಿಯ ಸಕಾರಾತ್ಮಕ ಮೌಲ್ಯಮಾಪನ, ಸಮುದಾಯದಿಂದ ಭರವಸೆ.
- ಮಗುವಿನ ಶೈಕ್ಷಣಿಕ/ವೃತ್ತಿ ಪರ ತರಬೇತಿ ಸೌಲಭ್ಯಗಳ ಬಗ್ಗೆ ಸೂಕ್ತ ಮಾರ್ಗದರ್ಶನ.
- ಸಭೆ ಸಮಾರಂಭಗಳಲ್ಲಿ ಮಗುವಿನ ನ್ಯೂನತೆಯ ಬಗ್ಗೆ ಅನಾವಶ್ಯಕ ಚರ್ಚೆಗೆ ಆಸ್ಪದ ಕೊಡದಿರುವುದು.
- ಮಗುವನ್ನು ಬೇರೆ ಎಲ್ಲಾ ಮಕ್ಕಳನ್ನು ನೋಡುವಂತೆಯೇ ನೋಡಿ ಆದರಿಸುವುದು.
- ಮಗುವಿನಲ್ಲಿರುವ ಯಾವುದೇ ಪ್ರಾಬಲ್ಯವನ್ನು ಗುರುತಿಸಿ ಪ್ರೋತ್ಸಾಹಿಸುವುದು.

**ತನಗೇ ತಾನೆ ತೋರುವ ಸ್ವಾತಂತ್ರ್ಯ:**

- ದಿನದಲ್ಲಿ ಸ್ವಲ್ಪ ಹೊತ್ತನ್ನು ತನ್ನ ಇಷ್ಟಗಳಿಗೆ ಸೀಮಿತವಾಗಿಡುವುದು.
- ತನ್ನ ಮನರಂಜನೆಗೆ ವಾರದಲ್ಲಿ ಒಂದೆರಡು ಘಂಟೆಯನ್ನು ನಿಗದಿಪಡಿಸುವುದು.
- ಸಂಗೀತ, ಚಿತ್ರಕಲೆ, ಅಡುಗೆಯ ಆಸಕ್ತಿಯಿದ್ದರೆ ಅದನ್ನು ಕಲಿಯಲು ತಿಂಗಳಲ್ಲಿ ಒಂದೆರಡು ತರಗತಿಗಳಿಗೆ ಹೋಗುವುದು.
- ನಂಬಿಕಸ್ಥ ಕುಟುಂಬದ ಸದಸ್ಯರು ಇಲ್ಲವೇ ಮಿತ್ರರೊಂದಿಗೆ ತನ್ನ ಸಮಸ್ಯೆಗಳನ್ನು ಚರ್ಚಿಸಿ,ಪರಿಹಾರ ಕೋರುವುದು.
- ನ್ಯೂನತೆಯುಳ್ಳ ಮಕ್ಕಳ ಪೋಷಕರೊಂದಿಗೆ ಮಾತನಾಡುವುದು.
- ಮಗುವಿನ ತರಬೇತಿಗೆ ಸಹಕರಿಸುವ ಪುಸ್ತಕಗಳನ್ನು ಓದುವುದು.
- ವೃತ್ತಿಪರ ತಜ್ಞರೊಂದಿಗೆ ಮಗುವಿನ ಏಳಿಗೆಯ ಬಗ್ಗೆ ಚರ್ಚೆ.

ಅಂಗವಿಕಲರ ಬಗ್ಗೆ ಅನುಕಂಪ, ಕಾಳಜಿ, ಸಹಾನುಭೂತಿ, ಎಲ್ಲವನ್ನೂ ಹೊಂದಿರುವ ನಮಗೆ ಅವರನ್ನು ಸಮಾಜದಲ್ಲಿ ನಮ್ಮೆಲ್ಲರಿಗೆ ಸಮನಾಗಿ ಭಾಗವಹಿಸುವ ಅವಕಾಶ ಕಲ್ಪಿಸುವುದು ಕಷ್ಟವೇನಲ್ಲ. ಇದಕ್ಕೆ ನಾವು ಮಾಡಬೇಕಿರುವುದು ಅವರ ಬೌದ್ಧಿಕ/ದೈಹಿಕ ಅಥವಾ ಮಾನಸಿಕ ವಿಕಲತೆಯನ್ನು ಪೂರ್ವಾಗ್ರಹ ಪೀಡಿತರಾಗದೆ ಒಪ್ಪಿಕೊಳ್ಳುವುದು. ಅವರೂ ನಮ್ಮ ನಿಮ್ಮಂತೆ ಮನುಷ್ಯರು ಎಂಬ ಸತ್ಯವನ್ನು ಮನಗಾಣುವುದು.

ಅವರ ಅಗತ್ಯಗಳು ಸ್ವಲ್ಪ ಮಟ್ಟಿಗೆ 'ವಿಶೇಷ'. ಉದಾಹರಣೆಗೆ ಕಿವಿ ಕೇಳಿಸದ ಮಗುವಿಗೆ ಶ್ರವಣೋಪಕರಣ ಬೇಕೇ ಬೇಕು. ಜೊತೆಗೆ ಆ ಮಗುವಿಗೆ ಶಬ್ದ, ಶಬ್ದಕ್ಕೆ ಅರ್ಥ, ಭಾಷೆ, ಮಾತು ಇವುಗಳನ್ನು ಕಲಿಸಲು ಯೋಜಿತ ಕಾರ್ಯಕ್ರಮದ ಅಗತ್ಯ ಇದೆ. ಇದಿಷ್ಟನ್ನು ವೃತ್ತಿಪರರು ಪೋಷಕರ ಸಹಕಾರದಿಂದ ಆ ಮಗುವಿಗೆ ಸರಿಯಾದ ಸಮಯದಲ್ಲಿ ನೀಡಿದ್ದೇ ಆದರೆ ಮಗುವು ಎಲ್ಲರಂತೆ ಸಮಾಜದಲ್ಲಿ ಹೊಂದಿಕೊಂಡು ಹೋಗುವುದು ಸುಲಭ. ಆತನ ವಿಶೇಷ ಅಗತ್ಯಗಳನ್ನು ತಿಳಿದುಕೊಂಡು ಅದನ್ನು ಕಲಿಸಲು ತಕ್ಕ ಸಂದರ್ಭ ಕಲ್ಪಿಸಿದರೆ ಮಗುವು ಮುಖ್ಯವಾಹಿನಿಯಲ್ಲಿ ಒಂದಾದಂತೆ. ಅಷ್ಟು ಮಾಡಲು ನಮಗೆ ಬೇಕಿರುವುದು ಏನು?

a) ಅಂಗವಿಕಲತೆಯ ಬಗ್ಗೆ ಮಾಹಿತಿ – ಇತ್ತೀಚೆಗೆ ಸರಕಾರದ ಹಲವಾರು ಯೋಜನೆಗಳ ಅಡಿಯಲ್ಲಿ ಈ ಮಾಹಿತಿ ಸಂಗ್ರಹಣೆಗೆ ನಡೆಯುತ್ತಿದೆ. ಆ ಅಂಕಿ ಅಂಶಗಳ ನಿಖರತೆಯ ಬಗ್ಗೆ ಪ್ರಸ್ತಾಪಿಸುತ್ತಾ ಕಾಲಹರಣ ಮಾಡುವುದು ನಮ್ಮ ಗುರಿ ಸಾಧನೆಯ ಹಾದಿಯಲ್ಲಿ ಬರುವುದಿಲ್ಲ. ಇರುವ ಮಾಹಿತಿಗೆ ಅನುಸಾರವಾಗಿ ನಾವು ನಮ್ಮ ಕಾರ್ಯ ಕ್ರಮವನ್ನು ರೂಪಿಸಿಕೊಳ್ಳಬೇಕು ಅಷ್ಟೆ.

b) ವಿಶೇಷ ಅಗತ್ಯಗಳಿಗೆ ತರಬೇತಿ ನೀಡಲು ವೃತ್ತಿ ನಿರತ ತಜ್ಞರು ಈ ಕ್ಷೇತ್ರದಲ್ಲಿನ ತೀವ್ರ ಕೊರತೆಯನ್ನು ಗಮನಿಸಿ ಇತ್ತೀಚೆಗೆ ಇದರ ಬಗ್ಗೆ ಸಾಕಷ್ಟು ನಿಗಾ ವಹಿಸಲಾಗಿದೆ. ಭಾರತೀಯ ಪುನರ್ವಸತಿ ಮಂಡಳಿಯ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಿ ವಿವಿಧ ವಿಶ್ವವಿದ್ಯಾ ನಿಲಯಗಳು, ಹಾಗೂ ಸಂಘ ಸಂಸ್ಥೆಗಳ ನೆರವಿನಿಂದ ದೇಶದ ಮೂಲೆ ಮೂಲೆಗೂ ತಲುಪಿಸುತ್ತಿದೆ. ವಿಶೇಷ ಶಿಕ್ಷಕರನ್ನು ನೇಮಿಸಿ ಹಳ್ಳಿಯ ಮೂಲೆಗಳಲ್ಲೂ ವಿವಿಧ ರೀತಿಯಲ್ಲಿ ಗಮನ ಹರಿಸುತ್ತಿದೆ.

c) ಹಣ ಕಾಸಿನ ನೆರವು: ಸರಕಾರ ಹಾಗೂ ಸರಕಾರೇತರ ಸಂಸ್ಥೆಗಳು ಅಂಗವಿಕಲರ ಕಲ್ಯಾಣಕ್ಕಾಗಿ ದುಡಿಯುತ್ತಿವೆ. ರಾಜ್ಯ ಹಾಗೂ ಕೇಂದ್ರ ಸರಕಾರದಿಂದ ಈ ದಿಕ್ಕಿನಲ್ಲಿ ಸಾಕಷ್ಟು ಹಣವೂ ಹರಿದು ಬರುತ್ತಿದೆ. ಅದರ ಸದುಪಯೋಗವೂ ಆಗುತ್ತಿದೆ. "ಇನ್ನೂ ಆಗಬೇಕಿದೆ" ಎನ್ನುವುದು ನಾವು ಮತ್ತೆ ಮತ್ತೆ ನಮ್ಮನ್ನು ಎಚ್ಚರಿಸಿಕೊಳ್ಳಲು ಇರುವ ಸೂಚನೆ. ಯಾವುದೇ ಸದುದ್ದೇಶದ ಕೆಲಸವೂ ಹಣದ ಅಡಚಣೆಯನ್ನು ಎದುರಿಸುವುದಿಲ್ಲ. ಸಕಾಲದಲ್ಲಿ ಹಣ ತಾನಾಗಿ ಒದಗಿ ಬರುತ್ತದೆ. ಸೇವಾ ಮನೋಭಾವ, ತಾಂತ್ರಿಕ ನೆರವು, ಪ್ರಗತಿಪರ ವಿಚಾರ ಇವು ಅಂಗವಿಕಲ ಮಕ್ಕಳ ಅಭಿವೃದ್ಧಿ ಕಾರ್ಯದಲ್ಲಿ ಎದುರಾಗುವ ತೊಡಕುಗಳಲ್ಲದೆ ಹಣಕಾಸಿನ ತೊಂದರೆ ಅಲ್ಲ.

d) ಮನೋಭಾವದಲ್ಲಿ ಬದಲಾವಣೆ: ಅಂಗವಿಕಲರ ಪುನರ್ವಸತಿ ಕಾರ್ಯವು ಸಂಪೂರ್ಣವಾಗಲು ಉಳಿದಿರುವುದು ಕೇವಲ ನಮ್ಮ ಸಂಕುಚಿತ ಮನಸ್ಸಿನ ವಿಕಾಸ. ಸಮಾಜದ ಎಲ್ಲ ನಾಗರಿಕರ ಮನಸ್ಸಿನಲ್ಲೂ ಅಂಗವಿಕಲರ ಬಗ್ಗೆ ಸಹಾನುಭೂತಿಯ ಜೊತೆಗೆ ಮಾನವೀಯ ಭಾವನೆ ಬೆಳೆದರೆ ಅವರ ಬಾಳಿಗೆ ಬೇಕಿರುವ ಅತೀ ಮುಖ್ಯ ತಿರುವು ಸಿಕ್ಕಂತೆಯೇ. ಇದಕ್ಕೆ ಬೇಕಿರುವ ಆಂದೋಲನ ಈಗ ಆಗಬೇಕಿದೆ. ಮುಖ್ಯವಾಗಿ ವಿವಿಧ ಅಂಗವಿಕಲತೆಯ ಬಗ್ಗೆ ಮಾಹಿತಿ, ಅವುಗಳಿಗೆ ಕಾರಣಗಳು ಎಲ್ಲರಿಗೂ ತಿಳಿಯುವಂತಾಗಬೇಕು. ದಟ್ಟವಾಗಿ ಹಬ್ಬಿರುವ ಮೂಢನಂಬಿಕೆಗಳು ಮಸುಕಾಗಬೇಕು. ಇದು ಸಾಧ್ಯವಾಗಲು ಸುಲಭ ವಿಧಾನ ಎಂದರೆ ಸಮಾಜದ ಎಲ್ಲ ವರ್ಗಗಳಿಗೂ ತಲುಪುವಂತೆ ನಮ್ಮ ಶಿಕ್ಷಣವನ್ನು ರೂಪಿಸುವುದು. ಮತ್ತು ಪ್ರಚಾರ ಮಾಧ್ಯಮಗಳ ಮೂಲಕ ಜನರನ್ನು ವಿಚಾರವಂತರಾಗುವಂತೆ ಪ್ರೇರೇಪಿಸುವುದು ಮತ್ತು ಅಂಗವಿಕಲರು ಎಲ್ಲ ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮ ಕೊಡುಗೆಯನ್ನು ನೀಡಲು ಮುಂದೆ ಬರುವುದು. ಕರ್ತವ್ಯ ನಿರತ ಅಂಗವಿಕಲರನ್ನು ಸಮಾಜ ಎಲ್ಲೆಡೆ ಕಾಣುವಂತಾದಾಗ ಅವರ ಬಗ್ಗೆ ಇರುವ ನಿಕೃಷ್ಟ ಭಾವನೆ ನಿರ್ಮೂಲವಾಗುತ್ತದೆ. ಅವರೂ ದೇಶದ ಅಭಿವೃದ್ಧಿಗೆ ತಮ್ಮ ಕೈ ಜೋಡಿಸುತ್ತಿದ್ದಾರೆ ಎಂಬ ತಿಳಿವಳಿಕೆ ಹರಡಿದಾಗ ಸಾಮಾಜಿಕ ಮನೋಭಾವನೆ ಬದಲಾಗುತ್ತದೆ.



ಪ್ರಪಂಚದಾದ್ಯಂತ ಅಂಗವಿಕಲರ ಸಮಸ್ಯೆ ಒಂದೇ. ಅವರನ್ನು ಯಾವುದೋ ಬೇರೊಂದು ಜೀವಿ ಎಂಬಂತೆ ಕಡೆಗಣ್ಣಿನಿಂದಲೂ ಗಮನಿಸದೆ ಸಮಾಜದ ಮುಖ್ಯವಾಹಿನಿಯಿಂದ ದೂರವಿರಿಸಿದ್ದರು. ಇತ್ತೀಚೆಗೆ ಈ ಧೋರಣೆ ಬದಲಾಗಿ ಅವರೂ ಕೂಡ ನಮ್ಮೆಲ್ಲರಂತೆ ಭಾವನೆಗಳಿಗೆ ಸ್ಪಂದಿಸಬಲ್ಲರು ಎಂದು ತಿಳಿದುಕೊಂಡು ಎಲ್ಲೆಡೆ ಸಮಾನ ಅವಕಾಶ ಕಲ್ಪಿಸಲಾಗುತ್ತಿದೆ. ಹಲವಾರು ಸಂಘ ಸಂಸ್ಥೆಗಳು ಅವರ ಏಳಿಗೆಗೆ ಶ್ರಮಿಸುತ್ತಿದೆ. ವೃತ್ತಿ ನಿರತರು ಈ ಕ್ಷೇತ್ರದಲ್ಲಿ ಸ್ವಾರ್ಥರಹಿತ ಸೇವೆ ಸಲ್ಲಿಸುತ್ತಿದ್ದಾರೆ. ಇವೆಲ್ಲ ಕಾರಣಗಳಿಂದಾಗಿ ಇನ್ನು ಕೆಲವೇ ವರ್ಷಗಳಲ್ಲಿ ಸಮಾಜದ ದೃಷ್ಟಿಯಲ್ಲಿ ಅಂಗವಿಕಲರು ನಿಷ್ಪ್ರಯೋಜಕರಲ್ಲ ಎಂದಾಗುತ್ತದೆ. ಅವರ ಪಾಲನೆ ಪೋಷಣೆಯ ಜವಾಬ್ದಾರಿ ನಮ್ಮೆಲ್ಲರದ್ದೂ ಆಗಿದೆ ಎಂಬ ಸತ್ಯ ಮನವರಿಕೆಯಾದರೆ ಅಂಗವಿಕಲ ಮಕ್ಕಳ ಪೋಷಕರ ಹೊರೆ ಎಷ್ಟೋ ಕಡಿಮೆಯಾಗುತ್ತದೆ. ಇವೆಲ್ಲ ಒಂದೆರಡು ದಿನಗಳಲ್ಲಿ ಕೈಗೂಡುವ ಕನಸಲ್ಲ ನಿಜ. ಆದರೆ, ಇದೇ ಅಲೆ ಮುಂದುವರಿಯುತ್ತಾ ಹೋದರೆ ನಮ್ಮೆಲ್ಲರ ಕನಸು ನನಸಾಗುವ ದಿನ ದೂರವಿಲ್ಲ.

**ನೆನಪಿರಲಿ: ಸಮನ್ವಯ ಶಿಕ್ಷಣ ಎಂದರೆ ನ್ಯೂನತೆಯಿರುವ ಮಕ್ಕಳನ್ನು ಅವರ ಜೊತೆಯ ಬೇರೆ ಮಕ್ಕಳೊಂದಿಗೆ ಬೆರೆಯುವಂತೆ ಅವಕಾಶ ನೀಡುವುದು. ಇದರಿಂದಾಗಿ ನ್ಯೂನತೆಯಿರುವ ಮಕ್ಕಳು ನ್ಯೂನತೆ ಇಲ್ಲದವರ ಜೊತೆ ಹತ್ತಿರದಿಂದ ನೋಡಿ, ಕಲಿಯುವ ಸೌಲಭ್ಯ ಸಿಗುತ್ತದೆ. ಈ ಮನೋಭಾವದಿಂದ ನ್ಯೂನತೆಯಿರುವ ಮಕ್ಕಳಿಗೂ ಸಹಾ ಎಲ್ಲರಂತೆ ಶಾಲೆಗೆ ಹೋಗುವ ಸಂದರ್ಭ ಸಿಗುತ್ತದೆ.**

"ಮನೆಗೆ ಸಮನಾದ ಶಾಲೆ ಇಲ್ಲ.........
ಪ್ರಜ್ಞಾವಂತ ಪೋಷಕರಿಗೆ ಸಮನಾದ ಶಿಕ್ಷಕರಿಲ್ಲ"

– ಗಾಂಧೀಜಿ



## ನಮ್ಮ ಸಂಸ್ಥೆಯ ಜನಶಿಕ್ಷಣ ಸಾಹಿತ್ಯದ ಪ್ರಕಟಣೆಗಳು

| | |
|---|---|
| ■ ಶ್ರವಣನ್ಯೂನತೆಯುಳ್ಳ ಮಕ್ಕಳ ಪೋಷಕರಿಗೆ ಕೈಪಿಡಿ | ರೂ. 10/- |
| ■ ಸೀಳು ತುಟಿ ಹಾಗೂ ಸೀಳು ಅಂಗುಳು–ಪೋಷಕರಿಗೊಂದು ಕೈಪಿಡಿ | ರೂ. 10/- |
| ■ ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳಿಗಾಗಿ ಸಂಕಲಿತ ಆಟಿಕೆಗಳು –ಬಳಸುವವರ ಕೈಪಿಡಿ | ರೂ. 50/- |
| ■ ಶಾಲಾಪೂರ್ವ ತರಬೇತಿ ಕಾರ್ಯಕ್ರಮಗಳು | ರೂ. 10/- |
| ■ ಶ್ರವಣದೋಷ ತಡೆಗಟ್ಟುವಿಕೆಗೆ ಅನುಸರಿಸಬೇಕಾದ ಕ್ರಮಗಳು | ರೂ. 10/- |
| ■ ನಮ್ಮ ಮನೆಯಂಗಳದ ಹೂವು – ಸಚಿತ್ರ ಪುಸ್ತಕ | ರೂ. 15/- |
| ■ ಕಿವಿಮಾತು – ಕಿರುನಾಟಕ | ರೂ. 15/- |
| ■ ಸಫಲತೆಗಿದುವೆ ಸರಿದಾರಿ – ಬೀದಿನಾಟಕ | ರೂ. 15/- |
| ■ ಮೋನಿ ನಿಜಕೂ ಧೀರ – ಕಥನ ಗೀತೆ | ರೂ. 15/- |
| ■ ಪತ್ರ ಹೇಳದ ಕಥೆ – ಕಥನ ಪುಸ್ತಕ | ರೂ. 15/- |
| ■ ನಮ್ಮೊಳಗೊಬ್ಬರು – ಕಥನ ಪುಸ್ತಕ | ರೂ. 15/- |

| | |
|---|---|
| ■ 25 Golden Rules for Parents of Children with Hearing Impairment | Rs. 10/- |
| ■ Preschool Training Program for Children with Communication Disorders | Rs. 10/- |
| ■ Break the Barrier of Silence – Cochlear Implant | Rs. 25/- |
| ■ Things You Always Wanted to Know About Learning Disability | Rs. 25/- |
| ■ Toy Kit for Kids with Developmental Disabilities | Rs. 50/- |

ಇದೀಗ ಲಭ್ಯವಿದೆ ! ಅಖಿಲ ಭಾರತ ವಾಕ್ ಶ್ರವಣ
ಸಂಸ್ಥೆಯು ನಿಮಗೆಂದೇ ಪ್ರಸ್ತುತಪಡಿಸಿರುವ ಧ್ವನಿಸುರುಳಿ
**"ಕಿವಿಮಾತು"**

# ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ, ಮೈಸೂರು

ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆಯು ಇಂದು ದೇಶವು ಹೆಮ್ಮೆಪಡುವಂತಹ ಸಂಸ್ಥೆಯಾಗಿ ಬೆಳೆದು ನಿಂತಿದೆ. ಈ ಸಂಸ್ಥೆಯು ಕಳೆದ ನಾಲ್ಕು ದಶಕಗಳಿಂದ ವಾಕ್-ಶ್ರವಣ ನ್ಯೂನತೆಯುಳ್ಳ ಜನರ ಸೇವೆಗೆ ಕಟಿಬದ್ಧವಾಗಿ ನಿಂತಿದೆ. ಸಂಶೋಧನೆ ಹಾಗೂ ಶೈಕ್ಷಣಿಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಗಳನ್ನು ಮಾಡಿದೆ. ಸಂಸ್ಥೆಯ ಶಾಲಾಪೂರ್ವ ತರಬೇತಿ ಕೇಂದ್ರದಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳನ್ನು ಸಾಮಾನ್ಯ ಶಾಲೆಗಳಿಗೆ ಪ್ರವೇಶ ಪಡೆಯಲು ಅರ್ಹರನ್ನಾಗಿ ಮಾಡಲು ತರಬೇತಿ ನೀಡಲಾಗುತ್ತಿದೆ. ಸಂಸ್ಥಯಲ್ಲಿ ವಾಕ್-ಶ್ರವಣ ನ್ಯೂನತೆಗಳುಳ್ಳ ಮಕ್ಕಳು 'ಅಂಗವಿಕಲರು' ಎನ್ನಿಸಿಕೊಳ್ಳುವುದಿಲ್ಲ. ಇಂತಹ ಮಕ್ಕಳನ್ನು 'ವಿಶೇಷ ಅರ್ಹತೆಯುಳ್ಳವರು' ಎಂದು ಪರಿಗಣಿಸಲಾಗುತ್ತದೆ. ಮಕ್ಕಳಲ್ಲಿರುವ ಈ 'ವಿಶೇಷ ಅರ್ಹತೆಗಳನ್ನು' ಬೆಳಸಿ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ನಮ್ಮ ಸಂಸ್ಥೆಯ ಮುಖ್ಯ ಆಶಯ. ಈ ನಿಟ್ಟಿನಲ್ಲಿ ನಿಮ್ಮ ಸಹಕಾರ ಬಹಳ ಮುಖ್ಯ.




**ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ**

ನೈಮಿಷಂ ಆವರಣ, ಮಾನಸಗಂಗೋತ್ರಿ, ಮೈಸೂರು - 570006

ದೂರವಾಣಿ: 2514449, 2515410, 2515805 ಟೆಲಿಫ್ಯಾಕ್ಸ್: 2510515

ಇಮೇಲ್:aiish_dir@yahoo.com ವೆಬ್‌ಸೈಟ್: www.aiishmysore.com

DMD AIISH 200